KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಜೂನ್ ೧೧, ೨೦೦೯ (ಜ್ಯೇಷ್ಠ ೨೧, ಶಕ ವರ್ಷ ೧೯೩೧) | ಸಂಚಿಕೆ ೨೪ |
|---|---|---|

## ಭಾಗ – ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ತೋಟಗಾರಿಕೆ ಇಲಾಖೆ**

**ತೋಟಗಾರಿಕೆ ಉಪನಿರ್ದೇಶಕರ ಕಛೇರಿ, ಲಾಲ್‌ಬಾಗ್ ಸಸ್ಯತೋಟ, ಬೆಂಗಳೂರು**

**ಸಂಕ್ಷಿಪ್ತ ಟೆಂಡರ್ ಪ್ರಕಟಣೆ**

**ಸಂಖ್ಯೆ:ತೋಉನಿ:ಲಾಸತೋ:ಬಿಜಿಟಿ:ವಿನಿ1:01:09–10, ಬೆಂಗಳೂರು, ದಿನಾಂಕ: 20ನೇ ಮೇ 2009**

2009–10ನೇ ಸಾಲಿಗಾಗಿ ಒಂದು ವರ್ಷದ ಅವಧಿಗಾಗಿ ಲಾಲ್‌ಬಾಗ್ ಸಸ್ಯತೋಟ ಹಾಗೂ ಕಬ್ಬನ್ ಉದ್ಯಾನವನ ಮತ್ತು ಅಧೀನದ ವಿವಿಧ ವಿಭಾಗಗಳ ಉದ್ಯಾನವನಗಳ ನಿರಂತರ ಉಪಯೋಗಕ್ಕೆ ಹಾಗೂ ವರ್ಷಕ್ಕೆ ಎರಡು ಬಾರಿ ನಡೆಯುವ ಫಲಪುಷ್ಪ ಪ್ರದರ್ಶನದ ಸಲುವಾಗಿ ಪರಿಕರಗಳು, ಕುಂಡಗಳು, ಸಲಕರಣೆಗಳು/ಸಾಮಾಗ್ರಿಗಳು, ಕ್ಲೈಂಬಿಂಗ್ ಆರ್ಚ್, ನಾಮಫಲಕಗಳು, ಡಸ್ಟ್ ಬಿನ್‌ಗಳು, ವಾರ್ಷಿಕ ಹೂವಿನ ಸಸಿ, ಗಿಡಗಳು, ವಿದ್ಯುತ್ ಉಪಕರಣಗಳು, ಇಂಟರ್ ಲಾಕಿಂಗ್ ಪೇವರ್ಸ್‌ಗಳು, ಹುಲ್ಲು ಹಾಸು ನವೀಕರಣ ಮತ್ತು ನಿರ್ವಹಣೆ ಹಾಗೂ ಇತರೆ ತೋಟಗಾರಿಕೆ ವಸ್ತುಗಳು ಹಾಗೂ ಸೇವೆಯ ಷರತ್ತು/ನಿಬಂಧನೆಗಳ ವಿವರಗಳನ್ನು ಕೆಳಸಹಿದಾರರ ಕಛೇರಿಯಿಂದ ಪಡೆದು, ಅದಕ್ಕನುಗುಣವಾಗಿ ಒದಗಿಸಲು/ಸರಬರಾಜು ಮಾಡಲು ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಕಛೇರಿ ವೇಳೆಯಲ್ಲಿ ರೂ.500/–ಗಳನ್ನು ಪಾವತಿಸಿ ಟೆಂಡರ್ ಫಾರಂಗಳನ್ನು ಪಡೆಯತಕ್ಕದ್ದು.

| | | |
|---|---|---|
| 1 | ಟೆಂಡರ್ ಫಾರಂಗಳ ವಿತರಣೆ | 05.06.2009 ರಿಂದ 17.6.2009 |
| 2 | ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ಸಲ್ಲಿಸಲು ಕಡೆಯ ದಿನಾಂಕ | 18.06.2009 ಸಂಜೆ 4.00 ಗಂಟೆಗೆ |
| 3 | ಟೆಂಡರ್‌ಗಳನ್ನು ತೆರೆಯುವುದು | 18.06.2009 ಸಂಜೆ 5.00 ಗಂಟೆಗೆ |
| 4 | ಇ.ಎಂ.ಡಿ. ಮೊತ್ತ | ರೂ.5,000.00 (ಷರತ್ತು/ನಿಬಂಧನೆಗಳಂತೆ) |

ಹೆಚ್ಚಿನ ಮಾಹಿತಿಗಾಗಿ ಕೆಳಕಂಡ ಕಛೇರಿಯನ್ನು ಸಂಪರ್ಕಿಸುವುದು.

ಪಿ.ಆರ್. 364 ತೋಟಗಾರಿಕೆ ಉಪ ನಿರ್ದೇಶಕರು, ಲಾಲ್‌ಬಾಗ್ ಸಸ್ಯತೋಟ.

**ತೋಟಗಾರಿಕೆ ಇಲಾಖೆ**

**ತೋಟಗಾರಿಕೆ ಉಪನಿರ್ದೇಶಕರ ಕಛೇರಿ, ಲಾಲ್‌ಬಾಗ್ ಸಸ್ಯತೋಟ, ಬೆಂಗಳೂರು**

**ಸಂಕ್ಷಿಪ್ತ ಟೆಂಡರ್ ಪ್ರಕಟಣೆ**

**ಸಂಖ್ಯೆ:ತೋಉನಿ:ಲಾಸತೋ:ಬಿಜಿಟಿ:ವಿನಿ1:01:09–10, ಬೆಂಗಳೂರು, ದಿನಾಂಕ: 20ನೇ ಮೇ 2009**

ಲಾಲ್‌ಬಾಗ್ ಸಸ್ಯತೋಟದಲ್ಲಿನ ವಿದ್ಯುತ್ ದೀಪಗಳ ದುರಸ್ತಿ/ಬದಲಾವಣೆ ಹಾಗೂ 750 ಕೆ.ವಿ.ಎ. ಸಬ್ ಡಿಸ್ಟ್ರಿಬ್ಯೂಷನ್ ಸ್ಟೇಷನ್ ವಾರ್ಷಿಕ ನಿರ್ವಹಣೆ ಕೆಲಸಗಳನ್ನು ಗುತ್ತಿಗೆ ಆಧಾರದ ಮೇಲೆ 2009–10ನೇ ಸಾಲಿನ ಒಂದು ವರ್ಷದ ಕಾಲ ನಿರ್ವಹಿಸಲು, ಕರ್ನಾಟಕ ಮಾರಾಟ ತೆರಿಗೆ ಮತ್ತು ಆದಾಯ ತೆರಿಗೆ ನೊಂದಣಿ ಹೊಂದಿರುವ ಕ್ಲಾಸ್–1 ವಿದ್ಯುತ್

ಗುತ್ತಿಗೆದಾರರಿಂದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಕಛೇರಿ ವೇಳೆಯಲ್ಲಿ ರೂ.500.00 ಗಳನ್ನು ಪಾವತಿಸಿ ಟೆಂಡರ್ ಫಾರಂಗಳನ್ನು ಪಡೆಯತಕ್ಕದ್ದು.

| | | |
|---|---|---|
| 1 | ಟೆಂಡರ್ ಫಾರಂಗಳ ವಿತರಣೆ | 10–06–09 ರಿಂದ 15–06–09ವರೆಗೆ |
| 2 | ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ಸಲ್ಲಿಸಲು ಕಡೆಯ ದಿನಾಂಕ | 16–06–09 ಮಧ್ಯಾಹ್ನ 1.00 ಗಂಟೆ |
| 3 | ಟೆಂಡರ್‌ಗಳನ್ನು ತೆರೆಯುವುದು | 16–06–09 ರಂದು ಸಂಜೆ 4.00 ಗಂಟೆಗೆ |
| 4 | ಇ.ಎಂ.ಡಿ. ಮೊತ್ತ | ರೂ.20000.00 |

ಹೆಚ್ಚಿನ ಮಾಹಿತಿಗಾಗಿ ಕೆಳಕಂಡ ಕಛೇರಿಯನ್ನು ಸಂಪರ್ಕಿಸುವುದು.

ಪಿ.ಆರ್. 365 ತೋಟಗಾರಿಕೆ ಉಪ ನಿರ್ದೇಶಕರು, ಲಾಲ್‌ಬಾಗ್ ಸಸ್ಯತೋಟ.

## ತೋಟಗಾರಿಕೆ ಇಲಾಖೆ

## ತೋಟಗಾರಿಕೆ ನಿರ್ದೇಶನಾಲಯ, ಲಾಲ್‌ಬಾಗ್, ಬೆಂಗಳೂರು–04

## ಸಾರ್ವಜನಿಕ ಟೆಂಡರ್ ಯಾ ಪ್ರಕಟಣೆ

**ಸಂ:ತೋಇ:ತೋಉನಿ:ಸಸಂ:ವಿನಿ2:6:2009–10, ಬೆಂಗಳೂರು, ದಿನಾಂಕ: 25ನೇ ಮೇ 2009**

**ವಿಷಯ:** ತೋಟಗಾರಿಕೆ ಉಪ ನಿರ್ದೇಶಕರು (ಸಸ್ಯ ಸಂರಕ್ಷಣೆ), ಲಾಲ್‌ಬಾಗ್, ಬೆಂಗಳೂರು ರವರ ಅಧೀನದ ಪ್ರಯೋಗಶಾಲೆಯಲ್ಲಿ ಪರೋಪಜೀವಿಗಳನ್ನು ಉತ್ಪಾದನೆ ಮಾಡಿಕೊಡಲು ಟೆಂಡರ್ ದರಗಳನ್ನು ನೀಡುವ ಬಗ್ಗೆ.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಈ ಮೂಲಕ ಸಾರ್ವಜನಿಕವಾಗಿ ಪ್ರಕಟಿಸುವುದೇನೆಂದರೆ ತೋಟಗಾರಿಕೆ ಉಪ ನಿರ್ದೇಶಕರು (ಸಸ್ಯ ಸಂರಕ್ಷಣೆ), ಲಾಲ್‌ಬಾಗ್, ಬೆಂಗಳೂರು ರವರ ಪ್ರಯೋಗಶಾಲೆಯಲ್ಲಿ ಪರೋಪಜೀವಿಗಳ ಉತ್ಪಾದನೆಯನ್ನು 2009–10ನೇ ಸಾಲಿನಲ್ಲಿ ಸ್ತ್ರೀ ಶಕ್ತಿ ಸಂಘ/ಕೃಷಿ ವಿಜ್ಞಾನ ಕೇಂದ್ರ/ತಾಂತ್ರಿಕ ಪರಿಣಿತಿವುಳ್ಳ ಗುತ್ತಿಗೆದಾರರಿಂದ ಕೈಗೊಳ್ಳಲು ಟೆಂಡರನ್ನು ಕರೆಯಲಾಗಿದೆ. ಪರೋಪಜೀವಿಗಳನ್ನು ಉತ್ಪಾದನೆ ಮಾಡಿಕೊಡಲು ಕೆಳಕಂಡ ಷರತ್ತುಗಳಿಗೆ ಒಳಪಟ್ಟು ದಿನಾಂಕ:15.06.2009 ಅಥವಾ ಒಳಗೆ ಪ್ರತಿ ಹುಳುವಿನ ಉತ್ಪಾದನೆಗೆ ತಮ್ಮ ದರ ನಮೂದಿಸಿ ಟೆಂಡರ್ ನೀಡಲು ಸ್ತ್ರೀ ಶಕ್ತಿ ಸಂಘ/ಕೃಷಿ ವಿಜ್ಞಾನ ಕೇಂದ್ರ/ತಾಂತ್ರಿಕ ಪರಿಣಿತಿವುಳ್ಳ ಗುತ್ತಿಗೆದಾರರುಗಳನ್ನು ಈ ಮೂಲಕ ವಿನಂತಿಸಿದೆ.

**ಷರತ್ತುಗಳು:**

1. ಟೆಂಡರ್‌ದಾರರು ಟೆಂಡರ್ ಜೊತೆಯಲ್ಲಿ ಇ.ಎಮ್.ಡಿ. ರೂ.10,000/– ಕ್ರಾಸ್ ಮಾಡಿದ ಡಿ.ಡಿ.ಯನ್ನು ತೋಟಗಾರಿಕೆ ಉಪ ನಿರ್ದೇಶಕರು (ಸಸ್ಯ ಸಂರಕ್ಷಣೆ), ಲಾಲ್‌ಬಾಗ್, ಬೆಂಗಳೂರು ರವರ ಹೆಸರಿನಲ್ಲಿ ಪಡೆದು ಲಗತ್ತಿಸಬೇಕು.

2. ಟೆಂಡರ್ ದರಗಳು ನಿಗದಿಪಡಿಸಿದ ಅವಧಿ ಒಳಗಾಗಿ ನೀಡಬೇಕು. ಅವಧಿ ನಂತರ ಬಂದ ದರಗಳನ್ನು ಯಾವುದೇ ಕಾರಣಕ್ಕೂ ಒಪ್ಪುವುದಿಲ್ಲ.

3. ಟೆಂಡರ್‌ದಾರರು ಇಲಾಖೆಯ ಮೂಲಭೂತ ಸೌಕರ್ಯಗಳನ್ನು ಉಪಯೋಗಿಸಿಕೊಂಡು ಗೋನಿಯೋಜಸ್ ಹಾಗೂ ಬ್ರ್ಯಾಕ್ಟಿಮೇರಿಯಾ ಪರೋಪಜೀವಿಗಳನ್ನು ಉತ್ಪಾದಿಸಲು ಅಗತ್ಯವಿರುವ ಪರಿಕರಗಳನ್ನು ಹಾಗೂ ಉತ್ಪಾದನಾ ವೆಚ್ಚವನ್ನು ಸೇರಿಸಿ ಟೆಂಡರ್ ದರ ನಮೂದಿಸಬೇಕು.

4. ಪರೋಪಜೀವಿಗಳನ್ನು ಲಾಲ್‌ಬಾಗಿನ ಪ್ರಯೋಗಶಾಲೆಯಲ್ಲಿಯೇ ಉತ್ಪಾದನೆ ಮಾಡಿಕೊಡಬೇಕು.

5. ಪರೋಪಜೀವಿಗಳನ್ನು ಉತ್ಪಾದನೆ ಮಾಡಿ ಪ್ರಯೋಗಶಾಲೆಯ ಅಧಿಕಾರಿಗಳಿಗೆ ವಹಿಸಿಕೊಟ್ಟ ಸಂಖ್ಯೆಗೆ ಅನುಗುಣವಾಗಿ ಹಣ ಸಂದಾಯ ಮಾಡಲಾಗುವುದು.

6. ಪ್ರಯೋಗಶಾಲೆಯಲ್ಲಿ ಸ್ವಚ್ಛತೆಗೆ ಹೆಚ್ಚಿನ ಆದ್ಯತೆ ನೀಡಬೇಕು.

7. ಪರೋಪಜೀವಿಗಳ ಉತ್ಪಾದನೆ ಕಾರ್ಯವನ್ನು ಸಾಲದ ರೂಪದಲ್ಲಿ ಕೈಗೊಳ್ಳಬೇಕಾಗಿರುವ ಕಾರಣ ಯಾವುದೇ ಮುಂಗಡ ಸಂದಾಯಕ್ಕೆ ಅವಕಾಶವಿರುವುದಿಲ್ಲ.

8. ಪರೋಪಜೀವಿಗಳ ಉತ್ಪಾದನೆ ಕಾರ್ಯವನ್ನು ದಿನಾಂಕ:31.03.2010ರ ತನಕ ನಿರ್ವಹಿಸಬೇಕಾಗಿರುತ್ತದೆ.

9. ಪರೋಪಜೀವಿಗಳ ಬೇಡಿಕೆಗೆ ಅನುಗುಣವಾಗಿ ಉತ್ಪಾದನಾ ಸಾಮರ್ಥ್ಯವನ್ನು ಸಹ ರೂಢಿಸಿಕೊಳ್ಳಬೇಕು. ಇಲಾಖೆಯಿಂದ ನಿಮಗೆ ಯಾವುದೇ ಸಹಾಯಕರನ್ನು ನೀಡುವುದಿಲ್ಲ. ಅನುಮೋದಿತ ಟೆಂಡರ್‌ದಾರರು ರೂ.100.00ಗಳ ಛಾಪಾ ಕಾಗದದಲ್ಲಿ ನಿಗದಿಪಡಿಸುವ ಷರತ್ತು ಮತ್ತು ಒಡಂಬಡಿಕೆಯನ್ನು ಬರೆದು ಕೊಡಬೇಕು.

10. ಟೆಂಡರ್ ದರಗಳು ಮೇಲಾಧಿಕಾರಿಗಳಿಂದ ಅನುಮೋದನೆಯಾದ ನಂತರ ಕಾರ್ಯಾದೇಶ ನೀಡಲಾಗುವುದು.

11. ಟೆಂಡರ್ ಫಾರಂ ಬೆಲೆ ರೂ.500/–ಗಳನ್ನು ಪಾವತಿಸಿ ಟೆಂಡರ್ ಫಾರಂಗಳನ್ನು ಕಛೇರಿ ಕೆಲಸದ ವೇಳೆಯಲ್ಲಿ ದಿನಾಂಕ:25.05.2009 ರಿಂದ 15.06.2009ರ (ಸಾಯಂಕಾಲ 5.00 ಗಂಟೆಯವರೆಗೆ) ಕಛೇರಿಯ ಕೆಲಸದ ಅವಧಿಯಲ್ಲಿ ಪಡೆಯಬಹುದು. ಭರ್ತಿ ಮಾಡಿದ ಮೊಹರಾದ ಟೆಂಡರ್‌ಗಳನ್ನು ತೋಟಗಾರಿಕೆ ಉಪ ನಿರ್ದೇಶಕರು (ಸಸ್ಯ ಸಂರಕ್ಷಣೆ), ಲಾಲ್‌ಬಾಗ್, ಬೆಂಗಳೂರು ಇವರಿಗೆ ದಿನಾಂಕ: 15.06.2009 ರಂದು ಸಾಯಂಕಾಲ 5.00 ಗಂಟೆಯೊಳಗೆ ಸಲ್ಲಿಸಬೇಕು. ಟೆಂಡರ್‌ಗಳನ್ನು ಟೆಂಡರ್ ಸಮಿತಿಯು ದಿನಾಂಕ: 16.06.2009ರ ಬೆಳಿಗ್ಗೆ 11.00 ಗಂಟೆಗೆ ತೋಟಗಾರಿಕೆ ಜಂಟಿ ನಿರ್ದೇಶಕರು (ತೋಟದ ಬೆಳೆಗಳು & ಸಸ್ಯ ಸಂರಕ್ಷಣೆ), ಲಾಲ್‌ಬಾಗ್, ಬೆಂಗಳೂರು ಕಛೇರಿಯಲ್ಲಿ ತೆರೆಯಲಾಗುವುದು.

12. ಪ್ರತಿ ಮಾಹೆ ಉತ್ಪಾದಿಸಬೇಕಾದ ಪರೋಪಜೀವಿಗಳ (ಹುಳುಗಳ) ಪ್ರಮಾಣವನ್ನು ಕಾರ್ಯಾದೇಶದ ಸಮಯದಲ್ಲಿ ನೀಡಲಾಗುವುದು.

13. ಯಶಸ್ವಿ ಟೆಂಡರ್‌ದಾರರಿಗೆ ಮುಂಗಡ ಹಣ ಪಾವತಿಸುವುದಿಲ್ಲ.

14. ಹೆಚ್ಚಿನ ಮಾಹಿತಿಗಾಗಿ ತೋಟಗಾರಿಕೆ ಉಪ ನಿರ್ದೇಶಕರು (ಸಸ್ಯ ಸಂರಕ್ಷಣೆ), ಲಾಲ್‌ಬಾಗ್, ಬೆಂಗಳೂರು ರವರ ಕಛೇರಿ ಇವರನ್ನು ಸಂಪರ್ಕಿಸುವುದು.

ಪಿ.ಆರ್. 366 ತೋಟಗಾರಿಕೆ ಉಪ ನಿರ್ದೇಶಕರು (ಸಸ್ಯ ಸಂರಕ್ಷಣೆ)

## ವಾಣಿಜ್ಯ ತೆರಿಗೆಗಳ ಇಲಾಖೆ

**ವಾಣಿಜ್ಯ ತೆರಿಗೆ ಆಯುಕ್ತರವರ ಕಛೇರಿ, ವಾಣಿಜ್ಯ ತೆರಿಗೆ ಕಾರ್ಯಾಲಯ–1, ಗಾಂಧಿನಗರ, ಬೆಂಗಳೂರು**

**ಸಾರ್ವಜನಿಕ ಹರಾಜು ಮಾರಾಟ ಪ್ರಕಟಣೆ**

**ಸಂಖ್ಯೆ: ವಿ.ಹೆಚ್.ಟಿ: ಸಿ.ಆರ್.–31/08–09, ಬೆಂಗಳೂರು, ದಿನಾಂಕ: 22ನೇ ಮೇ 2009**

**ವಿಷಯ:** ಬೆಂಗಳೂರಿನ ವಾಣಿಜ್ಯ ತೆರಿಗೆ ಇಲಾಖೆಯ ಕಚೇರಿಗಳಲ್ಲಿನ ನಿರುಪಯುಕ್ತ ವಾಹನಗಳನ್ನು ಬಹಿರಂಗ ಹರಾಜು ಮಾರಾಟದ ಮೂಲಕ ವಿಲೇವಾರಿ ಮಾಡುವ ಬಗ್ಗೆ.

**ಉಲ್ಲೇಖ:** ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಛೇರಿ, ಬೆಂಗಳೂರು (ಪಶ್ಚಿಮ)ರವರ ತಪಾಸಣಾ ವರದಿ ದಿನಾಂಕ: 23.01.2009.

ಸಾರ್ವಜನಿಕ ಮಾಹಿತಿಗಾಗಿ ಈ ಮೂಲಕ ತಿಳಿಯಪಡಿಸುವುದೇನೆಂದರೆ, ದಿನಾಂಕ: 22.06.2009ರಂದು ಮಧ್ಯಾಹ್ನ 3.00 ಗಂಟೆಗೆ ಬೆಂಗಳೂರಿನ ವಾಣಿಜ್ಯ ತೆರಿಗೆ ಇಲಾಖೆಯ ಕಚೇರಿಗಳಲ್ಲಿನ ನಿರುಪಯುಕ್ತ ವಾಹನಗಳನ್ನು ಬಹಿರಂಗ ಹರಾಜು ಮಾರಾಟದ ಮೂಲಕ ವಿಲೇವಾರಿ ಮಾಡಲಾಗುವುದು. ವಿವರಗಳು ಈ ಕೆಳಕಂಡಂತಿರುತ್ತವೆ:

1. ಬಹಿರಂಗ ಹರಾಜು ಮಾರಾಟ ದಿನಾಂಕ : 22.06.2009 ಮಧ್ಯಾಹ್ನ 3.00 ಗಂಟೆಗೆ
2. ಭದ್ರತಾ ಠೇವಣಿ : ರೂ.5,000–00
3. ಹರಾಜು ನಡೆಯುವ ಸ್ಥಳ : ವಾಣಿಜ್ಯ ತೆರಿಗೆ ಕಾರ್ಯಾಲಯ, ಕಾಳಿದಾಸ ರಸ್ತೆ, ಗಾಂಧಿನಗರ, ಬೆಂಗಳೂರು–9 ಕಟ್ಟಡದ ನೆಲಮಹಡಿಯ ಪ್ರವೇಶಾಂಗಣ.
4. ಹರಾಜು ಮಾರಾಟಕ್ಕಿರುವ ವಾಹನಗಳು :

| ಕ್ರ. ಸಂ. | ವಾಹನ ಸಂಖ್ಯೆ | ಮಾಡೆಲ್ | ತಯಾರಿಸಿದ ವರ್ಷ |
|---|---|---|---|
| 1 | CKG 981 | Ambassador-Petrol | 1988 |
| 2 | CKG 1134 | Ambassador-Petrol | 1989 |
| 3 | KA 01 G 1285 | Ambassador-Petrol | 1994 |
| 4 | KA 01 G 1274 | Ambassador-Petrol | 1993 |
| 5 | KA 01 G 865 | Fiat-Petrol | 1992 |
| 6 | KA 01 G 682 | Maruti Van-Petrol | 1992 |
| 7 | CKG 998 | Mahindra Jeep-Diesel | 1988 |
| 8 | KA 01 G 1118 | Ambassador/Petrol | 1993 |
| 9 | KA 01 G 3015 | Ambassador/Petrol | 1997 |

**ನಿಬಂಧನೆಗಳು:**

1. ಮೇಲೆ ತಿಳಿಸಿರುವ ನಿರುಪಯುಕ್ತ ವಾಹನಗಳನ್ನು ಈ ಕೆಳಗೆ ಸಹಿ ಮಾಡಿರುವ ಅಧಿಕಾರಿಯವರ ಅಥವಾ ಅವರು ನೇಮಿಸಿದ ಅಧಿಕಾರಿಗಳ ಸಮ್ಮುಖದಲ್ಲಿ ನಡೆಸಲಾಗುವುದು.
2. ವಾಹನಗಳನ್ನು "ಎಲ್ಲಿ ಹೇಗಿದೆಯೋ ಹಾಗೆ" ಬಹಿರಂಗ ಹರಾಜು ಮಾರಾಟ ನಡೆಸಲಾಗುವುದು.
3. ಹರಾಜಿನಲ್ಲಿ ಭಾಗವಹಿಸುವವರು ಹರಾಜಿಗೆ ಮುನ್ನ ಠೇವಣಿ ಹಣ ರೂ.5,000–00ವನ್ನು ನಗದು ಅಥವಾ ಡಿ.ಡಿ. ರೂಪದಲ್ಲಿ ಪಾವತಿ ಮಾಡಬೇಕಾಗುತ್ತದೆ.
4. ಹರಾಜಿನಲ್ಲಿ ಹಣ ಕಟ್ಟಿ ಯಶಸ್ವಿಯಾಗದವರಿಗೆ ಕಟ್ಟಿದ ಹಣವನ್ನು ಕೂಡಲೇ ಹಿಂತಿರುಗಿಸಲಾಗುವುದು.
5. ಹರಾಜಿನಲ್ಲಿ ಯಶಸ್ವಿ ಬಿಡ್ಡುದಾರರು ಹರಾಜು ಮುಗಿದ ಕೂಡಲೇ ಹರಾಜು ಮಾರಾಟದ ಮೊತ್ತ ಹಾಗೂ ತೆರಿಗೆಗಳು ಸೇರಿದಂತೆ ಶೇಕಡಾ 25 ಭಾಗ ಹಣವನ್ನು ಪಾವತಿ ಮಾಡುವುದು. ತಪ್ಪಿದಲ್ಲಿ, ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
6. ಉಳಿದ ಶೇಕಡಾ 75 ಭಾಗ (ಠೇವಣಿ ಹಣವನ್ನು ಕಳೆದು) ಹರಾಜಿನ ಹಣವನ್ನು ಹರಾಜಿನ ದಿನಾಂಕದಿಂದ 15 (ಹದಿನೈದು) ದಿನಗಳೊಳಗಾಗಿ ಪಾವತಿಸಿ, ನಂತರ ತಮ್ಮ ಸ್ವಂತ ಖರ್ಚಿನಲ್ಲಿ ವಾಹನವನ್ನು ಹಾಲಿ ಇರುವ ಜಾಗದಿಂದ ಯಥಾಸ್ಥಿತಿಯಲ್ಲಿ ಸಾಗಿಸಿಕೊಳ್ಳತಕ್ಕದ್ದು.
7. ಹರಾಜಿನಲ್ಲಿ ತೆಗೆದುಕೊಂಡ ವಾಹನವನ್ನು ನಿಗದಿತ ಅವಧಿಯೊಳಗೆ ಪೂರ್ತಿ ಹಣವನ್ನು ಕಟ್ಟಿ ಸ್ವಾಧೀನಕ್ಕೆ ತೆಗೆದುಕೊಳ್ಳದೆ ಹೋದ ಪಕ್ಷದಲ್ಲಿ ಪ್ರತಿ ದಿನಕ್ಕೆ ರೂ.50–00 ರಂತೆ ನೆಲಬಾಡಿಗೆ ವಿಧಿಸಲಾಗುವುದು. ಮತ್ತು ಒಂದು

ತಿಂಗಳೊಳಗಾಗಿ ಪೂರ್ತಿ ಹಣ ಕಟ್ಟದಿದ್ದರೆ, ಕಟ್ಟಿರುವ ಹಣವನ್ನು ಮುಟ್ಟುಗೋಲು ಹಾಕಿಕೊಂಡು ವಾಹನವನ್ನು ಹರಾಜು ಮೂಲಕ ಮತ್ತೆ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು.

8. ಇಲಾಖಾ ಸಿಬ್ಬಂದಿಯವರು ಹರಾಜಿನಲ್ಲಿ ಭಾಗವಹಿಸಲು ಅರ್ಹರಲ್ಲ.
9. ಬಹಿರಂಗ ಹರಾಜಿನಲ್ಲಿ ವಾದ ವಿವಾದಗಳಿಗೆ ಅವಕಾಶವಿರುವುದಿಲ್ಲ. ಯಾವುದೇ ತಕರಾರುಗಳಿಗೆ ವಾಣಿಜ್ಯ ತೆರಿಗೆ ಆಯುಕ್ತರ ತೀರ್ಮಾನವೇ ಅಂತಿಮವಾಗಿರುತ್ತದೆ.
10. ಯಾವುದೇ ಸಂದರ್ಭದಲ್ಲಿಯೂ ಹರಾಜು ಮಾರಾಟವನ್ನು ಅಂಗೀಕರಿಸುವ, ತಿರಸ್ಕರಿಸುವ, ಮುಂದೂಡುವ ಅಥವಾ ರದ್ದುಪಡಿಸುವ ಎಲ್ಲಾ ಅಧಿಕಾರಗಳನ್ನು ವಾಣಿಜ್ಯ ತೆರಿಗೆ ಆಯುಕ್ತರು ಹೊಂದಿರುತ್ತಾರೆ.

ಪಿ.ಆರ್. 367 ವಾಣಿಜ್ಯ ತೆರಿಗೆಗಳ ಆಯುಕ್ತರ ಪರವಾಗಿ (ಕರ್ನಾಟಕ), ಬೆಂಗಳೂರು.

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ

## ಕಾರ್ಯನಿರ್ವಾಹಕ ಇಂಜಿನಿಯರರ ಕಛೇರಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಮಂಗಳೂರು ವಿಭಾಗ, ಮಂಗಳೂರು

### ಟೆಂಡರ್ ಪ್ರಕಟಣೆ

**ಸಂಖ್ಯೆ:8:ಜಿಎನ್ಎಲ್:ಟಿ.ಎನ್‌ಡಿ(8):2008–09:ಎಇ–1, ಮಂಗಳೂರು, ದಿನಾಂಕ: 25ನೇ ಮೇ 2009**

ಈ ಕೆಳಕಂಡ ಕೆಲಸಕ್ಕೆ ಪ್ರತ್ಯೇಕ ಮೊಹರಾದ ಟೆಂಡರುಗಳನ್ನು ದ್ವಿಪ್ರತಿಗಳಲ್ಲಿ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿಸಲಾದ ಅರ್ಹ ದರ್ಜೆಯ ಗುತ್ತಿಗೆದಾರರಿಂದ ಕೆಲಸದ ಹೆಸರನ್ನು ಮೊಹರಾದ ಲಕೋಟೆಯ ಮೇಲೆ ನಮೂದಿಸಿದ ಕಾರ್ಯನಿರ್ವಾಹಕ ಇಂಜಿನಿಯರರು, ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು ಇವರು ದಿನಾಂಕ: 9.7.2009ರಂದು ಸಂಜೆ:4.00 ಗಂಟೆಯವರೆಗೆ ಟೆಂಡರುಗಳನ್ನು ಸ್ವೀಕರಿಸುವರು.

ಖಾಲಿ ಟೆಂಡರು ಫಾರಂಗಳ ಅರ್ಜಿಗಳನ್ನು ನಿಗದಿಪಡಿಸಿದ ಬೆಲೆಯೊಂದಿಗೆ (ಇದನ್ನು ಹಿಂತಿರುಗಿಸುವುದಿಲ್ಲ) ಮತ್ತು ನಿಗದಿಪಡಿಸಿದ ಇ.ಎಂ.ಡಿ.ಯೊಂದಿಗೆ ದಿನಾಂಕ: 8.7.2009ರ ವರೆಗೆ ಕೆಲಸದ ಎಲ್ಲಾ ದಿನಗಳಂದು ಕಛೇರಿ ವೇಳೆಯಲ್ಲಿ ಸ್ವೀಕರಿಸಲಾಗುವುದು. ಗುತ್ತಿಗೆದಾರರು ರಿಜಿಸ್ಟ್ರೇಷನ್ ಸರ್ಟಿಫೈಡ್ ಪ್ರತಿ ಹಾಗೂ ಈ ತರಹದ ಕಾಮಗಾರಿಗಳನ್ನು ಕೈಗೊಂಡ ಬಗ್ಗೆ ಅನುಭವ ಪತ್ರವನ್ನು ಸಲ್ಲಿಸತಕ್ಕದ್ದು. KW-1 ಟೆಂಡರ್ Section 3 ರಲ್ಲಿ ಕೇಳಿರುವ Qualification Information ನ್ನು ನಿಗದಿತ ನಮೂನೆಯಲ್ಲಿ ಅರ್ಜಿದಾರರು ಭರ್ತಿ ಮಾಡಿ ಸಲ್ಲಿಸತಕ್ಕದ್ದು. ಖಾಲಿ ಟೆಂಡರು ಫಾರಂಗಳನ್ನು ದಿನಾಂಕ: 8.7.2009ರ ಸಂಜೆ:5.30ರ ತನಕ ನೀಡಲಾಗುವುದು.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿಟ್ಟ ಮೊತ್ತ (ರೂ.ಲಕ್ಷಗಳಲ್ಲಿ) | ಗುತ್ತಿಗೆದಾರರ ಅರ್ಹತೆ | ಇ.ಎಂ.ಡಿ ಠೇವಣಿ (ರೂ.ಗಳಲ್ಲಿ) | ಕಾಮಗಾರಿ ಅವಧಿ (ಮಳೆಗಾಲ ಹೊರತುಪಡಿಸಿ) | ಟೆಂಡರು ನಮೂನೆ | ಟೆಂಡರು ಫಾರಂ ಬೆಲೆ (ರೂ.ಗಳಲ್ಲಿ) |
|---|---|---|---|---|---|---|---|
| I | **ಲೆಕ್ಕ ಶೀರ್ಷಿಕೆ 5054 ಟಿ.ಎಸ್.ಪಿ (ಒ.ಆರ್.ಎಫ್)** | | | | | | |
| 1 | ಪುತ್ತೂರು ತಾಲ್ಲೂಕಿನ ನೆಟ್ಟಣ – ಬಿಳಿನೆಲೆ ಗ್ರಾಮದ ಬೈಲು ಎಂಬಲ್ಲಿ ರಸ್ತೆ ನಿರ್ಮಾಣ ಕಿ.ಮೀ. 0.50 ರಿಂದ 1.00ರ ವರೆಗೆ ಆಯ್ದ ಭಾಗಗಳಲ್ಲಿ ಅಭಿವೃದ್ಧಿ | 6.96 | 3ನೇ ದರ್ಜೆ ಮತ್ತು ಮೇಲ್ಪಟ್ಟು | 17,400.00 | 3 ತಿಂಗಳು | K/W-1 | 1650.00 |
| 2 | ಬೆಳ್ತಂಗಡಿ ತಾಲ್ಲೂಕು ಪುದುವೆಟ್ಟು – ಕಾಯರ್ತಡ್ಕ – ನಿಡ್ಲೆ ರಸ್ತೆಯ ಕಿ.ಮೀ. 1.50 ರಿಂದ 2.00ರ ವರೆಗೆ ರಸ್ತೆ ಅಭಿವೃದ್ಧಿ | 5.25 | 3ನೇ ದರ್ಜೆ ಮತ್ತು ಮೇಲ್ಪಟ್ಟು | 13,125.00 | 3 ತಿಂಗಳು | K/W-1 | 1650.00 |
| 3 | ಸುಳ್ಯ ತಾಲ್ಲೂಕಿನ ಬೈತಡ್ಕ – ಮಂಡೆಕೋಲು ರಸ್ತೆಯ ಕಿ.ಮೀ. 7.00 ರಿಂದ 7.50ರ ವರೆಗೆ ಅಭಿವೃದ್ಧಿ | 5.41 | 3ನೇ ದರ್ಜೆ ಮತ್ತು ಮೇಲ್ಪಟ್ಟು | 13,525.00 | 3 ತಿಂಗಳು | K/W-1 | 1650.00 |
| II | **ಲೆಕ್ಕಶೀರ್ಷಿಕೆ 5054 ಎಸ್.ಸಿ.ಪಿ. ನಬಾರ್ಡ್** | | | | | | |
| 1 | ಮಂಗಳೂರು ತಾಲ್ಲೂಕಿನ ಆನೆಗುಡ್ಡೆ ತಂಡ್ರಕೆರೆಯಾಗಿ ಅಮ್ಮನೊಟ್ಟು ರಸ್ತೆ ಕಿ.ಮೀ. 2.00 ರಿಂದ 4.00 ಅಭಿವೃದ್ಧಿ | 10.28 | 2ನೇ ದರ್ಜೆ ಮತ್ತು ಮೇಲ್ಪಟ್ಟು | 25,700.00 | 3 ತಿಂಗಳು | K/W-1 | 2750.00 |
| 2 | ಮಂಗಳೂರು ತಾಲ್ಲೂಕಿನ ಮುತ್ತೂರು ಅಂಬೇಡ್ಕರ್ ಹರಿಜನ ಕೊಲನಿ ರಸ್ತೆ ಅಭಿವೃದ್ಧಿ | 6.40 | 3ನೇ ದರ್ಜೆ ಮತ್ತು ಮೇಲ್ಪಟ್ಟು | 16,000.00 | 3 ತಿಂಗಳು | K/W-1 | 1650.00 |

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿಟ್ಟ ಮೊತ್ತ (ರೂ.ಲಕ್ಷಗಳಲ್ಲಿ) | ಗುತ್ತಿಗೆದಾರರ ಅರ್ಹತೆ | ಇ.ಎಂ.ಡಿ ಠೇವಣಿ (ರೂ.ಗಳಲ್ಲಿ) | ಕಾಮಗಾರಿ ಅವಧಿ (ಮಳೆಗಾಲ ಹೊರತುಪಡಿಸಿ) | ಟೆಂಡರು ನಮೂನೆ | ಟೆಂಡರು ಫಾರಂ ಬೆಲೆ (ರೂ.ಗಳಲ್ಲಿ) |
|---|---|---|---|---|---|---|---|
| 3 | ಪುತ್ತೂರು ತಾಲ್ಲೂಕಿನ ಕಾವು ಈಶ್ವರಮಂಗಲ ರಸ್ತೆಯ ಕಿ.ಮೀ. 8.50 ರಿಂದ 9.00ರ ವರೆಗೆ ಅಗಲಗೊಳಿಸಿ ಅಭಿವೃದ್ಧಿ | 12.60 | 2ನೇ ದರ್ಜೆ ಮತ್ತು ಮೇಲ್ಪಟ್ಟು | 31,500.00 | 3 ತಿಂಗಳು | K/W-1 | 2750.00 |
| 4 | ಬೆಳ್ತಂಗಡಿ ತಾಲ್ಲೂಕು ಕಿಲ್ಲೂರು – ಕಾಜೂರು ರಸ್ತೆಯ ಕಿ.ಮೀ 12.60 ರಿಂದ 13.60ರ ವರೆಗೆ ರಸ್ತೆ ಅಭಿವೃದ್ಧಿ | 6.31 | 3ನೇ ದರ್ಜೆ ಮತ್ತು ಮೇಲ್ಪಟ್ಟು | 15,775.00 | 3 ತಿಂಗಳು | K/W-1 | 1650.00 |
| 5 | ಬೆಳ್ತಂಗಡಿ ತಾಲ್ಲೂಕು ತೋಟತ್ತಾಡಿ – ಚಿಬಿದ್ರೆ ರಸ್ತೆಯ ಕಿ.ಮೀ. 2.60 ರಿಂದ 4.00ರ ವರೆಗೆ ರಸ್ತೆ ಅಭಿವೃದ್ಧಿ | 6.32 | 3ನೇ ದರ್ಜೆ ಮತ್ತು ಮೇಲ್ಪಟ್ಟು | 15,800.00 | 3 ತಿಂಗಳು | K/W-1 | 1650.00 |
| 6 | ಸುಳ್ಯ ತಾಲ್ಲೂಕಿನ ಉಬರಡ್ಕ – ಮಿತ್ತೂರ್ ರಸ್ತೆಯ ಕಿ.ಮೀ. 2.50 ರಿಂದ 4.50ರ ವರೆಗೆ ಅಭಿವೃದ್ಧಿ | 17.92 | 2ನೇ ದರ್ಜೆ ಮತ್ತು ಮೇಲ್ಪಟ್ಟು | 44,800.00 | 3 ತಿಂಗಳು | K/W-1 | 2750.00 |
| 7 | ಬಂಟ್ವಾಳ ತಾಲ್ಲೂಕಿನ ನರಿಕೊಂಬು ಗ್ರಾಮದ ನಿನ್ನಿಪಡ್ಪು ಪರಿಶಿಷ್ಟಜಾತಿ ಕಾಲೋನಿ ರಸ್ತೆ ಕಿ.ಮೀ. 0.50 ರಿಂದ 1.00 ವರೆಗೆ ಅಭಿವೃದ್ಧಿ | 6.93 | 3ನೇ ದರ್ಜೆ ಮತ್ತು ಮೇಲ್ಪಟ್ಟು | 17,325.00 | 3 ತಿಂಗಳು | K/W-1 | 1650.00 |

**ಸೂಚನೆಗಳು:–**

1. ಉದ್ದೇಶಿಸಿರುವ ಕಾಮಗಾರಿಯ ಶೇ. 50ರಷ್ಟು ಮೊತ್ತದ ಇದೇ ತರಹದ ಕಾಮಗಾರಿಯನ್ನು ಕಳೆದ 5 ವರ್ಷಗಳ ಅವಧಿಯ ಒಂದು ಆರ್ಥಿಕ ವರ್ಷದಲ್ಲಿ ಪೂರೈಸಿರತಕ್ಕದ್ದು. ಈ ಕುರಿತು ಪ್ರಮಾಣಪತ್ರವನ್ನು ಸಕ್ಷಮ ಅಧಿಕಾರಿಯವರಿಂದ ಪಡೆದು ಅರ್ಜಿಯೊಂದಿಗೆ ಸಲ್ಲಿಸತಕ್ಕದ್ದು.
2. ಯಾವುದೇ ಟೆಂಡರನ್ನು ಅಥವಾ ಎಲ್ಲಾ ಟೆಂಡರುಗಳನ್ನು ಯಾವುದೇ ಕಾರಣ ನೀಡದೇ ತಿರಸ್ಕರಿಸುವ ಅಥವಾ ಅಂಗೀಕರಿಸುವ ಹಕ್ಕನ್ನು ಸಂಬಂಧಪಟ್ಟ ಇಲಾಖಾ ಅಧಿಕಾರಿಯವರು ಹೊಂದಿರುತ್ತಾರೆ.
3. ಇ.ಎಂ.ಡಿ.ಯನ್ನು ರಾಷ್ಟ್ರೀಕೃತ ಯಾ ಶೆಡ್ಯೂಲ್ ಬ್ಯಾಂಕಿನಿಂದ ಪಡೆದ ಎಫ್.ಡಿ.ಆರ್ / ಕಾಲ್‌ಡೆಪೋಸಿಟ್, ಡಿ.ಡಿ ಅಥವಾ ಎನ್.ಎಸ್.ಸಿ. ರೂಪದಲ್ಲಿ (ಎನ್‌ಎಸ್‌ಸಿಯನ್ನು ಕೆಳಸಹಿದಾರರ ಹೆಸರಿಗೆ ಪ್ಲೆಡ್ಜ್ ಮಾಡಿ) ಸಲ್ಲಿಸಬೇಕು. ನಿಗದಿಪಡಿಸಿದ ಮುಂಗಡ ಠೇವಣಿಯೊಂದಿಗೆ ಸಲ್ಲಿಸದ ಟೆಂಡರನ್ನು ಪರಿಗಣಿಸಲಾಗುವುದಿಲ್ಲ.
4. ಗುತ್ತಿಗೆದಾರರು ಕೆಲಸವನ್ನು ನಿಗದಿತ ಸಮಯದಲ್ಲಿ ಮಾಡಿ ಮುಗಿಸತಕ್ಕದ್ದು, ತಪ್ಪಿದಲ್ಲಿ ನಿಯಮದಂತೆ ದಂಡವನ್ನು ವಿಧಿಸಲಾಗುವುದು.
5. ಕಾಮಗಾರಿಗೆ ಬೇಕಾದ ಸಿಮೆಂಟ್, ಡಾಂಬರು, ಜಲ್ಲಿ, ಉಕ್ಕು ಮತ್ತು ಇನ್ನಿತರ ಎಲ್ಲಾ ಸಾಮಗ್ರಿಗಳನ್ನು ಗುತ್ತಿಗೆದಾರರೇ ಒದಗಿಸಿಕೊಳ್ಳತಕ್ಕದ್ದು ಹಾಗೂ ಇದನ್ನು ಸಕ್ಷಮ ಅಧಿಕಾರಿಯವರಿಂದ ಪರೀಕ್ಷೆ ಪಡೆದು ಫಲಿತಾಂಶವು ಐ.ಎಸ್.ಐ. ಗುಣವನ್ನು ಖಚಿತಪಡಿಸಿ ಕೆಲಸಕ್ಕೆ ಉಪಯೋಗಿಸತಕ್ಕದ್ದು. ಈ ಅಂಶವನ್ನು ಗುತ್ತಿಗೆದಾರರು ಟೆಂಡರನ್ನು ಸಲ್ಲಿಸುವಾಗ ಗಮನಿಸುವುದು.
6. ಯಶಸ್ವಿ ಟೆಂಡರುದಾರರು ನಿರ್ವಹಿಸುವ ಕಾಮಗಾರಿಯ ಮೊತ್ತದ ಶೇ.1ರಷ್ಟನ್ನು ಲೇಬರ್ ಸೆಸ್‌ನ್ನಾಗಿ ಸರಕಾರಿ ಆದೇಶ ಸಂ. ಯಲ್‌ಡಿ 3:ಎಲ್ಇಡಿ 2006:ಬೆಂಗಳೂರು: ದಿನಾಂಕ: 18.1.2007ರಂತೆ ಕಡಿತಗೊಳಿಸಲಾಗುವುದು.
7. ಕೆಲಸದ ಕುರಿತಾದ ಯಾವುದೇ ವಿವರಗಳನ್ನು ಕಛೇರಿ ವೇಳೆಯಲ್ಲಿ ಈ ಕಛೇರಿಯಿಂದ ಪಡೆಯಬಹುದಾಗಿದೆ. ಹಾಗೂ ಇಲಾಖೆಯ ವೆಬ್‌ಸೈಟ್ "htpp://www.kpwd.gov.in" ನಲ್ಲಿ ಸಂಪರ್ಕಿಸಬಹುದು.

ಕಾರ್ಯನಿರ್ವಾಹಕ ಇಂಜಿನಿಯರ್, ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು.

ಪಿ.ಆರ್. 368

**ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**

**ಕಾರ್ಯನಿರ್ವಾಹಕ ಇಂಜಿನಿಯರರ ಕಛೇರಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**

**ಮಂಗಳೂರು ವಿಭಾಗ, ಮಂಗಳೂರು**

**ಇ–ಟೆಂಡರ್ ಟೆಂಡರ್ ಪ್ರಕಟಣೆ (ದ್ವಿಲಕೋಟೆ ಪದ್ಧತಿ)**

**ಲೋ.ಇ:ಮಂ.ವಿ:ಟಿ.ಎನ್.ಡಿ(7ಇ):2009–10:ಎಇ1, ಮಂಗಳೂರು, ದಿನಾಂಕ: 25ನೇ ಮೇ 2009**

1 ಈ ಕೆಳಗೆ ತಿಳಿಸಿದ ಕಾಮಗಾರಿಗಳಿಗೆ ಸಂಬಂಧಿಸಿದಂತೆ ಇ–ಟೆಂಡರ್‌ನ್ನು ಕರ್ನಾಟಕ ಸರಕಾರದ ರಾಜ್ಯಪಾಲರ ಪರವಾಗಿ ಕರ್ನಾಟಕ ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಅಂತರ್‌ಜಾಲದ ವೆಬ್‌ಸೈಟ್

https://eproc.karnataka.gov.in ನಲ್ಲಿ ಕಾರ್ಯನಿರ್ವಾಹಕ ಇಂಜಿನಿಯರರು, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು ಇವರು ಅರ್ಹರಾದ ಗುತ್ತಿಗೆದಾರರಿಂದ ಟೆಂಡರ್‌ನ್ನು ದ್ವಿಲಕೋಟೆ ಪದ್ಧತಿಯಲ್ಲಿ ಆಹ್ವಾನಿಸಿರುತ್ತಾರೆ. ಟೆಂಡರುದಾರರು ಟೆಂಡರ್ ನಿಯಮಾವಳಿಯ ಕ್ಲಾಜ್ 3 ರಂತೆ ಕನಿಷ್ಠ ಅರ್ಹತೆಯನ್ನು ಪಡೆದಿರಬೇಕು ಎಂಬುದನ್ನು ಗಮನಿಸಲು ಸೂಚಿಸಲಾಗಿದೆ.

2. ದಿನಾಂಕ: 15.6.2009 ರಿಂದ 9.7.2009ರ ವರೆಗೆ ಟೆಂಡರುದಾರರು ಕರ್ನಾಟಕ ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಅಂತರ್‌ಜಾಲದ ವೆಬ್‌ಸೈಟ್ ಮುಖಾಂತರ ಟೆಂಡರು ಡಾಕ್ಯುಮೆಂಟ್‌ಗಳನ್ನು ಪಡೆಯಬಹುದಾಗಿರುತ್ತದೆ. (Download).
3. ಟೆಂಡರುಗಳು ಈ ಕೆಳಗೆ ನೀಡಲಾದ ವಿವರದಂತೆ ಕಾಮಗಾರಿಗೆ ನಿಗದಿಪಡಿಸಿದ ಇ.ಎಂ.ಡಿಯನ್ನು ಟೆಂಡರ್ ಜೊತೆಯಲ್ಲಿ ಲಗತ್ತಿಸಬೇಕು. ಇ.ಎಂ.ಡಿ.ಯನ್ನು ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್‌ನಲ್ಲಿ ಸೂಚಿಸಿರುವಂತೆ ಯಾವುದಾದರೂ ಒಂದು ರೀತಿಯಲ್ಲಿ ಸಲ್ಲಿಸಬಹುದಾಗಿರುತ್ತದೆ ಮತ್ತು ಅದರ ಊರ್ಜಿತ ಅವಧಿಯು ಟೆಂಡರು ಊರ್ಜಿತ ಅವಧಿಗಿಂತ 45 ದಿನಗಳು ಹೆಚ್ಚಾಗಿ ಇರಬೇಕು.
4. ಟೆಂಡರುಗಳನ್ನು ಕರ್ನಾಟಕ ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್‌ನ ಆನ್‌ಲೈನ್‌ನಲ್ಲಿ ದಿನಾಂಕ: 9.7.2009ರ ಅಪರಾಹ್ನ 4.00 ಗಂಟೆ (16 :00 ಗಂಟೆ) ಒಳಗೆ ಸಲ್ಲಿಸತಕ್ಕದ್ದು. ಟೆಂಡರನ್ನು ಕರ್ನಾಟಕ ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್‌ನ ಮಾರ್ಗಸೂಚಿಯಂತೆ ತೆರೆಯಲಾಗುವುದು.
5. ಹೆಚ್ಚಿನ ವಿವರಗಳನ್ನು ಟೆಂಡರು ಡಾಕ್ಯುಮೆಂಟ್‌ನಲ್ಲಿ ಪಡೆಯಬಹುದಾಗಿರುತ್ತದೆ.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿಟ್ಟ ಮೊತ್ತ (ರೂ.ಲಕ್ಷಗಳಲ್ಲಿ) | ಇ.ಎಂ.ಡಿ. ಠೇವಣಿ (ಲಕ್ಷ ರೂ.ಗಳಲ್ಲಿ) | ಕಾಮಗಾರಿಯನ್ನು ಪೂರ್ಣಗೊಳಿಸಲು ಕಾಲಾವಧಿ (ಮಳೆಗಾಲ ಸೇರಿ) |
|---|---|---|---|---|
| **I** | **ಕೇಂದ್ರ ರಸ್ತೆ ನಿಧಿ ಕಾಮಗಾರಿಗಳು (5054 ರಸ್ತೆ ಮತ್ತು ಸೇತುವೆಗಳು ಯೋಜನೇತರ)** | | | |
| 1 | ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕು ಗುರುವಾಯನಕೆರೆ – ಉಪ್ಪಿನಂಗಡಿ ರಸ್ತೆಯ (ರಾಜ್ಯ ಹೆದ್ದಾರಿಯ – 118) ಆಯ್ದು ಭಾಗಗಳಲ್ಲಿ ಅಭಿವೃದ್ಧಿ ಕಾಮಗಾರಿ | 170.00 | 2.55 | 9 ತಿಂಗಳು |
| 2 | ದಕ್ಷಿಣ ಕನ್ನಡ ಜಿಲ್ಲೆ ಬೆಳ್ತಂಗಡಿ ಮತ್ತು ಮಂಗಳೂರು ತಾಲ್ಲೂಕುಗಳಲ್ಲಿ ಬೆಳ್ತಂಗಡಿ–ಮುಲ್ಕಿ–ಮೂಡಬಿದ್ರೆ ರಸ್ತೆಯ ಕಿ.ಮೀ. 0.00 ರಿಂದ 62.25 ಕಿ.ಮೀ (ರಾಜ್ಯ ಹೆದ್ದಾರಿಯ – 70) ಆಯ್ದು ಭಾಗಗಳಲ್ಲಿ ಅಭಿವೃದ್ಧಿ ಕಾಮಗಾರಿ | 250.00 | 3.75 | 12 ತಿಂಗಳು |
| 3 | ದಕ್ಷಿಣ ಕನ್ನಡ ಜಿಲ್ಲೆ ಪುತ್ತೂರು ತಾಲ್ಲೂಕು ವಿಟ್ಲ – ಕಬಕ ರಸ್ತೆಯ ಕಿ.ಮೀ 69.00 ರಿಂದ 79.00ರವರೆಗೆ (ರಾಜ್ಯ ಹೆದ್ದಾರಿಯ – 101) ಅಗಲೀಕರಣ ಮತ್ತು ಅಭಿವೃದ್ಧಿ ಕಾಮಗಾರಿ. | 150.00 | 2.55 | 9 ತಿಂಗಳು |

ಕಾರ್ಯನಿರ್ವಾಹಕ ಇಂಜಿನಿಯರ್, ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಪಿ.ಆರ್. 369 ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು.

**ಲೋಕೋಪಯೋಗಿ ಇಲಾಖೆ**

**ಕಾರ್ಯನಿರ್ವಾಹಕ ಇಂಜಿನಿಯರರ ಕಛೇರಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಮಂಗಳೂರು ವಿಭಾಗ, ಮಂಗಳೂರು**

**ಸಮಯಾವಧಿ ವಿಸ್ತರಣೆ**

**ಸಂಖ್ಯೆ:ಲೋ.ಇ:ಮಂವಿ:ಟಿ.ಎನ್.ಡಿ(5ಇ):2009–10:ಎಇ–1, ದಿನಾಂಕ: 18ನೇ ಮೇ 2009**

ದಿನಾಂಕ:10.3.2009ರ 'ಉದಯವಾಣಿ' ಮತ್ತು 11.3.2009ರ "ಡೆಕ್ಕನ್ ಹೆರಾಲ್ಡ್" ದಿನಪತ್ರಿಕೆಗಳಲ್ಲಿ ಪ್ರಕಟವಾದ ಈ ಕಛೇರಿಯ ಟೆಂಡರ್ ನೋಟೀಫಿಕೇಶನ್ ನಂ. ಐಎಫ್‌ಟಿ ಸಂಖ್ಯೆ:ಕೆಪಿಡಬ್ಲ್ಯುಡಿ:2008–09:ವರ್ಕ್ ಇಂಡೆಂಟ್:29:ಇ–

ಪ್ರೊಕ್ಯೂರ್‌ಮೆಂಟ್:ಎಇ–2:ದಿನಾಂಕ:6.3.2009ರ ಟೆಂಡರು ಮುಂದೂಡಿಕೆಯನ್ನು ಈಗ ಚುನಾವಣೆ ನೀತಿ ಸಂಹಿತೆ ತೆರವುಗೊಳಿಸಿರುವುದರಿಂದ ಈ ಕೆಳಗೆ ಕಾಣಿಸಿದ ಟೆಂಡರುಗಳಿಗೆ ದಿನಾಂಕಗಳನ್ನು ಈ ಕೆಳಕಂಡಂತೆ ಮರುನಿಗದಿಪಡಿಸಲಾಗಿದೆ.

| ಕ್ರ. ಸಂ. | ಕಾಮಗಾರಿ ಹೆಸರು | ಟೆಂಡರಿಗಿಟ್ಟ ಮೊತ್ತ (ರೂ. ಲಕ್ಷಗಳಲ್ಲಿ) |
|---|---|---|
| | **ನಬಾರ್ಡ್ ಆರ್.ಐ.ಡಿ.ಎಫ್. – 14** | |
| | **ರಸ್ತೆಗಳು:** | |
| 1. | ಮಂಗಳೂರು ತಾಲ್ಲೂಕಿನ ಪಡುಪಣಂಬೂರು ಚೆಲಿಯಾರು ಗ್ರಾಮದ ಸುಣ್ಣದಗೂಡು – ಕೆರೆಕಾಡು ರಸ್ತೆ ಅಭಿವೃದ್ಧಿ | 67.70 |
| 2. | ಮಂಗಳೂರು ತಾಲ್ಲೂಕಿನ ಮುಚ್ಚೂರು – ವಿವೇಕನಗರ ರಸ್ತೆ ಅಭಿವೃದ್ಧಿ | 50.50 |
| 3. | ಮಂಗಳೂರು ತಾಲ್ಲೂಕಿನ ಎಡಪದವು – ಬಾರ್ದಿಲ – ಕಾಪಿಕಾಡು ರಸ್ತೆ ಅಭಿವೃದ್ಧಿ | 90.00 |
| 4. | ಮಂಗಳೂರು ತಾಲ್ಲೂಕಿನ ಕಂದಾವರ – ಸುಂಕದಕಟ್ಟೆ – ಬೇಡೆಮಾರು ರಸ್ತೆ ಅಭಿವೃದ್ಧಿ (2ನೇ ಹಂತ) | 60.00 |
| 5. | ಬಂಟ್ವಾಳ ತಾಲ್ಲೂಕಿನ ಹಿತ್ತಿಲುಸೊನಾರು – ಒಡಿಯೂರು – ಮಿತ್ತನಡ್ಕ ರಸ್ತೆ ಅಭಿವೃದ್ಧಿ | 75.00 |
| 6. | ಬಂಟ್ವಾಳ ತಾಲ್ಲೂಕಿನ ಕುಡ್ಡುಪದವು – ಅಮ್ಮೈ ರಸ್ತೆ ಅಭಿವೃದ್ಧಿ | 100.00 |
| 7. | ಪುತ್ತೂರು ತಾಲ್ಲೂಕಿನ ಇವಮಾಡು – ಪಾಲೆಪಡ್ಡಿ ಅಮ್ಮೈ ರಸ್ತೆ ಅಭಿವೃದ್ಧಿ | 69.00 |
| 8. | ಸುಳ್ಯ ತಾಲ್ಲೂಕಿನ ನರಕೋಡು – ಕೊಲ್ಚಾರು – ಬಂಡ್ಯಡ್ಕ ರಸ್ತೆ ಅಭಿವೃದ್ಧಿ | 95.00 |
| 9. | ಬೆಳ್ತಂಗಡಿ ತಾಲ್ಲೂಕಿನ ಮಚೀನ ಗ್ರಾಮದ ಪರಡ್ಕ – ಥಾರೆಮಾರು ರಸ್ತೆ ಅಭಿವೃದ್ಧಿ | 50.50 |
| | **ಸೇತುವೆಗಳು** | |
| 10. | ಪುತ್ತೂರು ತಾಲ್ಲೂಕಿನ ಉಪ್ಪಿನಂಗಡಿ – ಪೆರಿಯಡ್ಕ – ನಕ್ಕರೆ – ಕೊರಂಬಾಡಿ – ಹಿರೇಬಂಡಾಡಿ ರಸ್ತೆಯಲ್ಲಿ ಸೇತುವೆ ನಿರ್ಮಾಣ | 100.00 |

1. ದಿನಾಂಕ: 8.6.2009 ರಿಂದ 16.6.2009 ರ ವರೆಗೆ ಟೆಂಡರುದಾರರು ಕರ್ನಾಟಕ ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಅಂತರ್‌ಜಾಲದ ವೆಬ್‌ಸೈಟ್ ಮುಖಾಂತರ ಟೆಂಡರು ಡಾಕ್ಯುಮೆಂಟ್‌ಗಳನ್ನು ದಿನಾಂಕ: 16.6.2009ರ ವರೆಗೆ ಪಡೆಯಬಹುದಾಗಿರುತ್ತದೆ. (Download)
2. ಟೆಂಡರುಗಳನ್ನು ಕರ್ನಾಟಕ ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್‌ನ ಆನ್‌ಲೈನ್‌ನಲ್ಲಿ ದಿನಾಂಕ: 16.6.2009ರ ಅಪರಾಹ್ನ 4.00 ಗಂಟೆ (16 :00 ಗಂಟೆ) ಒಳಗೆ ಸಲ್ಲಿಸತಕ್ಕದ್ದು. ಟೆಂಡರನ್ನು ಕರ್ನಾಟಕ ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್‌ನ ಮಾರ್ಗಸೂಚಿಯಂತೆ ತೆರೆಯಲಾಗುವುದು.

ಮೇಲಿನ ಬದಲಾವಣೆಗಳನ್ನು ಹೊರತುಪಡಿಸಿ ಇನ್ನಾವುದೇ ಬದಲಾವಣೆ ಇರುವುದಿಲ್ಲ. ಹೆಚ್ಚಿನ ವಿವರಗಳನ್ನು ಇ – ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಅಂತರ್‌ಜಾಲದ ವೆಬ್‌ಸೈಟ್ http//eproc.karnataka.gov.in ನಲ್ಲಿರುವ ಟೆಂಡರು ಡಾಕ್ಯುಮೆಂಟ್‌ನಲ್ಲಿ ಪಡೆಯಬಹುದಾಗಿದೆ. ಹಾಗೂ ನೋಟಿಫಿಕೇಷನ್‌ನ್ನು http//www.kpwd.gov.in ಇಲಾಖಾ ವೆಬ್‌ಸೈಟ್‌ನಲ್ಲಿ ಪಡೆಯಬಹುದು.

ಕಾರ್ಯನಿರ್ವಾಹಕ ಇಂಜಿನಿಯರರು, ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಪಿ.ಆರ್. 370 ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು.

## ಅರಣ್ಯ ಇಲಾಖೆ

### ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ವಿಭಾಗ, ಅರಣ್ಯ ಭವನದ ಪಕ್ಕದ ಕಟ್ಟಡ 18ನೇ ಅಡ್ಡರಸ್ತೆ. ಮಲ್ಲೇಶ್ವರಂ, ಬೆಂಗಳೂರು

### ಟೆಂಡರ್ ಪ್ರಕಟಣೆ

**ಸಂಖ್ಯೆ: ಎ2/ಉಅಸಂ(ಬೆಂಗ್ರಾ)/ಬಿಯುಡಿ/ವಿವ–24/06–07, ದಿನಾಂಕ: 29ನೇ ಮೇ 2009**

**ವಿಷಯ:** 2009–10ನೇ ಸಾಲಿನಲ್ಲಿ ನಲ್ಲೂರು ಅಮರಾಯಿ ಸರ್ವೆ ನಂ. 53 ರಲ್ಲಿ ಇರುವ ಪರಂಪರಾಗತ ಹುಣಸೆ ಮರಗಳ ಸಂರಕ್ಷಣೆ ಮತ್ತು ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳುವ ಕುರಿತು.

2009–10ನೇ ಸಾಲಿನಲ್ಲಿ ಬೆಂಗಳೂರು ಗ್ರಾಮಾಂತರ ವಿಭಾಗದ ದೇವನಹಳ್ಳಿ ವಲಯದ ನಲ್ಲೂರು ಅಮರಾಯಿ ಸರ್ವೆ ನಂ. 53 ರಲ್ಲಿ ಇರುವ ಪರಂಪರಾಗತ ಹುಣಸೆ ಮರಗಳ ಸಂರಕ್ಷಣೆ ಮತ್ತು ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲು ಬೆಂಗಳೂರು ಗ್ರಾಮಾಂತರ ವಿಭಾಗದಲ್ಲಿ ನೊಂದಾಯಿತರಾಗಿರುವ ಅರಣ್ಯ ಗುತ್ತಿಗೆದಾರರಿಂದ ದಿನಾಂಕ 25–06–2009 ರಂದು ಮತ್ತು 30–06–2009 ರಂದು ಟೆಂಡರನ್ನು ಕರೆಯಲಾಗಿದೆ. ಟೆಂಡರನ್ನು ದಿನಾಂಕ 25–06–2009 ರಂದು ಅಪರಾಹ್ನ 1.30 ಗಂಟೆಯವರೆಗೆ ಮೊಹರಾದ ಟೆಂಡರ್‌ಗಳನ್ನು ಸ್ವೀಕರಿಸಲಾಗುವುದು. ಒಂದು ವೇಳೆ ದಿನಾಂಕ 25–06–2009 ರಂದು

ನಡೆಯುವ ಟೆಂಡರ್‌ನಲ್ಲಿ ಅರಣ್ಯ ಗುತ್ತಿಗೆದಾರರು ಭಾಗವಹಿಸದೇ ಇದ್ದಲ್ಲಿ ಇದನ್ನೇ ಮರು ಟೆಂಡರ್ ಪ್ರಕಟಣೆ ಎಂದು ತಿಳಿದು ದಿನಾಂಕ 30–06–2009 ರಂದು ಅಪರಾಹ್ನ 1.30 ಗಂಟೆಯವರೆಗೆ ಮೊಹರಾದ ಟೆಂಡರ್‌ಗಳನ್ನು ಸ್ವೀಕರಿಸಲಾಗುವುದು. ಟೆಂಡರ್ ಫಾರಂಗಳನ್ನು ದಿನಾಂಕ 25–06–2009 ರಂದು ಮತ್ತು 30–06–2009 ರಂದು ಕಛೇರಿ ಕೆಲಸದ ವೇಳೆಯಲ್ಲಿ ಅಂದರೆ ಬೆಳಿಗ್ಗೆ 10.00 ಗಂಟೆಯಿಂದ ಮಧ್ಯಾಹ್ನ 1 ಗಂಟೆಯವರೆಗೆ ಈ ಕಛೇರಿಯಿಂದ ಪಡೆಯಬಹುದಾಗಿದೆ. ಕೆಲಸದ ವಿವರ ಈ ಕೆಳಗೆ ನೀಡಲಾಗಿರುವ ಷೆಡ್ಯೂಲ್‌ನಲ್ಲಿರುವಂತಿರುತ್ತವೆ.

**ಷೆಡ್ಯೂಲ್**

I. ನಲ್ಲೂರು ಅಮರಾಯಿ ಸರ್ವೆ ನಂ. 53 ರಲ್ಲಿ ಇರುವ ಪರಂಪರಾಗತ ಹುಣಸೆ ಮರಗಳ ಸಂರಕ್ಷಣೆ ಮತ್ತು ಅಭಿವೃದ್ಧಿ ಕಾಮಗಾರಿ :–

| ಕ್ರ. ಸಂ. | ಸ್ಥಳ | ಕಾಮಗಾರಿ ವಿವರ | ಭೌತಿಕ (ಕಿ. ಮೀ ಗಳಲ್ಲಿ) | ಟೆಂಡರ್ ಅಂದಾಜು ಮೊತ್ತ (ರೂ.ಗಳಲ್ಲಿ) | ಇ.ಎಂ.ಡಿ. (ಇಡಿಗಂಟು ರೂ.) | ಕಾಮಗಾರಿ ಪೂರೈಸಬೇಕಾದ ದಿನಾಂಕ |
|---|---|---|---|---|---|---|
| 1 | ದೇವನಹಳ್ಳಿ ವಲಯ | Fencing the balance area along the roadside in Nallur Tamarind Heritge site. | 1 | 1,76,177.00 | 40,404.00 | 15–07–2009 |

**ನಿಬಂಧನೆಗಳು**

1. ಟೆಂಡರ್ ಫಾರಂಗಳನ್ನು ಫಾರಂ ಒಂದಕ್ಕೆ ರೂ. 200.00 ಗಳು ಹಾಗೂ ತೆರಿಗೆ ಪಾವತಿ ಮಾಡಿ ದಿನಾಂಕ: 25.06.2009 ರಂದು ಕಚೇರಿ ಕೆಲಸದ ವೇಳೆಯಲ್ಲಿ ಅಪರಾಹ್ನ 1.00 ಗಂಟೆಯವರೆಗೆ ಪಡೆಯಬಹುದು ಒಂದು ವೇಳೆ 25.06.2009 ರಂದು ಟೆಂಡರ್ ನಡೆಯದೇ ಇದ್ದಲ್ಲಿ ದಿನಾಂಕ 30–06–2009 ರಂದು ಟೆಂಡರ್‌ನಲ್ಲಿ ಭಾಗವಹಿಸಲು ಇಚ್ಛೆಯುಳ್ಳವರು ಈ ವಿಭಾಗದಲ್ಲಿ 2009–10ನೇ ಸಾಲಿಗೆ ತಮ್ಮ ಹೆಸರನ್ನು ಅರಣ್ಯ ಗುತ್ತಿಗೆದಾರರಾಗಿ ನೋಂದಾಯಿಸಿಕೊಂಡಿರಬೇಕು. ತಪ್ಪಿದ್ದಲ್ಲಿ ಅಂತಹವರ ಟೆಂಡರನ್ನು ಪರಿಗಣಿಸಲಾಗುವುದಿಲ್ಲ.
2. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ಪ್ರತಿ ಬ್ಲಾಕ್‌ಗೆ ಸಂಬಂಧಿಸಿದಂತೆ ಪ್ರತ್ಯೇಕವಾಗಿ ಇಎಂಡಿಯೊಂದಿಗೆ ಸಲ್ಲಿಸುವುದು.
3. ಭರ್ತಿ ಮಾಡಿದ ಟೆಂಡರ್ ಫಾರಂ ಅನ್ನು 25–06–2009ರಂದು ಅಪರಾಹ್ನ 1.30 ಗಂಟೆಯವರೆಗೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು ಇವರು ಅಥವಾ ಅವರಿಂದ ನಿಯೋಜಿಸಲ್ಪಟ್ಟ ಅಧಿಕಾರಿಗಳು ಸ್ವೀಕರಿಸುವರು ಹಾಗೂ ಅಂದೇ ಅಪರಾಹ್ನ 4.00 ಗಂಟೆಗೆ ಟೆಂಡರ್‌ನ್ನು ತೆರೆಯಲಾಗುವುದು ಮತ್ತು ಮೇಲ್ಕಂಡ ದಿನಾಂಕದಂದು ಯಾವುದೇ ಕಾರಣದಿಂದಾಗಿ ಟೆಂಡರ್ ನಡೆಯದಿದ್ದರೆ ಇದೇ ಪ್ರಕಟಣೆಯ ಷರತ್ತಿಗೆ ಒಳಪಟ್ಟು ಪುನಃ ದಿನಾಂಕ: 30–06–2009 ರಂದು ಅಪರಾಹ್ನ 4.00 ಗಂಟೆಗೆ ಟೆಂಡರ್‌ನ್ನು ತೆರೆಯಲಾಗುವುದು ಈ ಬಗ್ಗೆ ಮತ್ತೆ ಪ್ರತ್ಯೇಕವಾದ ಪ್ರಕಟಣೆ ಹೊರಡಿಸುವುದಿಲ್ಲ.
4. ಈ ಸದರಿ ಕಾಮಗಾರಿಗಳು ಕಾಲಬದ್ಧ ಕೆಲಸಗಳಾಗಿದ್ದು, ಒಂದು ಪಕ್ಷ ಯಾವುದಾದರೂ ಕಾಮಗಾರಿಯನ್ನು ಟೆಂಡರ್ ಮುಂಚೆಯೇ ಕೈಗೊಂಡಿದ್ದ ಪಕ್ಷದಲ್ಲಿ ಮತ್ತು ಕೆಲವು ಕೆಲಸಗಳನ್ನು ಕೈಬಿಡಬೇಕಾದ ಸಂದರ್ಭದಲ್ಲಿ ಅಂತಹ ಕೆಲಸಗಳನ್ನು ಈ ಪ್ರಕಟಣೆಯ ಟೆಂಡರಿನಿಂದ ಹೊರತುಪಡಿಸಿ ಉಳಿದ ಕಾಮಗಾರಿಗಳಿಗೆ ಸಂಬಂಧಿಸಿದಂತೆ ಟೆಂಡರ್‌ದಾರರಿಗೆ ಕಾಮಗಾರಿ ಕೈಗೊಳ್ಳಲು ಆದೇಶ ನೀಡಲಾಗುವುದು
5. ಪ್ರತಿ ಟೆಂಡರ್‌ದಾರರು ಈ ಕಾಮಗಾರಿಗಳನ್ನು ನೆರವೇರಿಸಲು ಅಗತ್ಯವಿರುವ ಸಲಕರಣೆಗಳನ್ನು ಹಾಗೂ ಸಾಗಾಣಿಕೆ ವ್ಯವಸ್ಥೆಯನ್ನು ಅವರೇ ಸ್ವಂತವಾಗಿ ಮಾಡಿಕೊಳ್ಳಬೇಕು.
6. ಈ ಮೇಲಿನ ಕೆಲಸಗಳಿಗೆ ಟೆಂಡರ್ ಸಲ್ಲಿಸಲು ಇಚ್ಛಿಸುವ ಗುತ್ತಿಗೆದಾರರು ಆಯಾ ಕೆಲಸಕ್ಕೆ ನಿಗದಿಪಡಿಸಿರುವ ಇಎಂಡಿ ಹಾಗೂ ಭದ್ರತಾ ಠೇವಣಿ ಮೊತ್ತಕ್ಕೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು ಇವರ ಪರವಾಗಿ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದ ಡಿಡಿ ರೂಪದಲ್ಲಿ ಟೆಂಡರ್ ಜೊತೆಗೆ ಸಲ್ಲಿಸಬೇಕಾಗುತ್ತದೆ.
7. ಗುತ್ತಿಗೆದಾರರು ಷರತ್ತುಗಳನ್ನೊಳಗೊಂಡ ಟೆಂಡರ್‌ಗಳನ್ನು ಸಲ್ಲಿಸದಿದ್ದಲ್ಲಿ ಅಂತಹವುಗಳನ್ನು ತಿರಸ್ಕರಿಸಲಾಗುವುದು. ಇದರ ಬಗ್ಗೆ ಏನಾದರು ತಕರಾರುಗಳು ಉದ್ಭವವಾದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು ರವರ ತೀರ್ಮಾನವೇ ಅಂತಿಮವಾಗಿರುತ್ತದೆ.
8. ನಿಗದಿಪಡಿಸಿದ ಅವಧಿಯ ನಂತರ ಬಂದ ಟೆಂಡರ್‌ಗಳನ್ನು ಸ್ವೀಕರಿಸಲಾಗುವುದಿಲ್ಲ.
9. ಯಾವುದೇ ಕಾರಣ ನೀಡದೆ ಟೆಂಡರ್‌ಗಳನ್ನು ಒಪ್ಪುವ ಹಾಗೂ ತಿರಸ್ಕರಿಸುವ ಹಕ್ಕನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು ರವರು ಕಾಯ್ದಿರಿಸಿಕೊಂಡಿರುತ್ತಾರೆ.
10. ಟೆಂಡರ್‌ನಲ್ಲಿ ಯಶಸ್ವಿಯಾದ ಅರಣ್ಯ ಗುತ್ತಿಗೆದಾರರಿಗೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು ಇವರಿಂದ ತಿಳುವಳಿಕೆ ನೀಡಿದ 7 ದಿವಸಗಳ ಒಳಗಾಗಿ ನಿರ್ದಿಷ್ಟ ನಮೂನೆಯಲ್ಲಿ ಕರಾರು

ನಾಮೆಯನ್ನು ಸಹಿ ಮಾಡತಕ್ಕದ್ದು. ಈ ಅವಧಿಯನ್ನು ವಿಸ್ತರಿಸುವ ಅಧಿಕಾರ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು ಇವರು ಹೊಂದಿರುತ್ತಾರೆ.

11. ಈ ಮೇಲಿನ ಕಾಮಗಾರಿಗಳ ಅನುಷ್ಠಾನ ಅರಣ್ಯ ಸಂರಕ್ಷಣಾಧಿಕಾರಿಗಳಿಂದ ವಾರ್ಷಿಕ ಕ್ರಿಯಾ ಯೋಜನೆಯ ಅನುಮೋದನೆ ನಿಬಂಧನೆಗೆ ಒಳಪಟ್ಟಿರುತ್ತದೆ. ಒಂದು ಪಕ್ಷ ಸರ್ಕಾರದಿಂದ ಹಣ ಬಿಡುಗಡೆ ತಡವಾದ ಪಕ್ಷದಲ್ಲಿ ಅಂತಹ ಹಣ ಪಾವತಿಗಳಿಗೆ ಯಾವುದೇ ತರಹದ ಬಡ್ಡಿ ನೀಡಲಾಗುವುದಿಲ್ಲ. ಹಾಗೂ ಹಣ ಬಿಡುಗಡೆಯಾಗದಿದ್ದಲ್ಲಿ ಅಂತಹ ಕಾಮಗಾರಿಗಳನ್ನು ಅನುಷ್ಠಾನದಿಂದ ಕೈ ಬಿಡಲಾಗುವುದು.

12. ಎಲ್ಲಾ ಕೆಲಸಗಳು ಆಗಿಂದಾಗ್ಗೆ ಮುಕ್ತಾಯವಾದ ನಂತರ ಸದರಿ ಕೆಲಸಗಳನ್ನು ನಿಯಮದಂತೆ ಸಂಬಂಧಿಸಿದ ಅಧಿಕಾರಿಗಳಿಂದ ತನಿಖೆ ಮಾಡಿಸಿ ವಲಯ ಅರಣ್ಯಾಧಿಕಾರಿಗಳ ಮುಖಾಂತರ ಬಿಲ್ಲುಗಳನ್ನು ಅಳತೆ ಪುಸ್ತಕದೊಂದಿಗೆ (ಎಂ.ಬಿ/ಎಫ್.ಎನ್.ಬಿ) ಒಪ್ಪಿಸಬೇಕಾಗುತ್ತದೆ. ಮತ್ತು ಬಿಲ್ ಸಂದಾಯ ಮಾಡುವಾಗ ಸದರಿ ಬಿಲ್‌ಗಳಲ್ಲಿ ನಿಯಮದಂತೆ ಚಾಲ್ತಿಯಲ್ಲಿರುವ ಆದಾಯ ತೆರಿಗೆ, ಸರ್ ಚಾರ್ಜ್ ಮತ್ತು ಭದ್ರತಾ ಠೇವಣಿ ಹಣವನ್ನು ಕಡಿತಗೊಳಿಸಲಾಗುವುದು ಮತ್ತು ಆಗಿಂದಾಗ್ಗೆ ಬದಲಾಗುವ ತೆರಿಗೆಗಳ ವ್ಯತ್ಯಾಸವನ್ನು ಸಹ ನಿಯಮದಂತೆ ಕಡಿತಗೊಳಿಸಲಾಗುವುದು.

13. ಕೆಲಸಗಳನ್ನು ನಿರ್ವಹಿಸುವಾಗ ಇತರೆ ನೆಡುತೋಪುಗಳನ್ನು ಹಾಳು ಮಾಡಿದಲ್ಲಿ ಗಿಡ ಮರಗಳನ್ನು ಕಡಿದು ನಾಶಪಡಿಸಿದಲ್ಲಿ ಸರ್ಕಾರಕ್ಕೆ ಆದ ನಷ್ಟದ ಬಗ್ಗೆ ಸಂಬಂಧಪಟ್ಟ ಗುತ್ತಿಗೆದಾರರ ಮೇಲೆ ಕಾನೂನಿನ ಕ್ರಮ ಜರುಗಿಸಲಾಗುವುದು. ಮತ್ತು ಉಂಟಾದ ನಷ್ಟವನ್ನು ಅವರಿಂದ ವಸೂಲಿ ಮಾಡಲಾಗುವುದು.

14. ಕೆಲಸಗಳ ವಿವರಗಳು ಮತ್ತು ಹೆಚ್ಚಿನ ನಿಬಂಧನೆಗಳನ್ನು ಈ ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ತಿಳಿದುಕೊಳ್ಳಬಹುದಾಗಿದೆ.

15. ಯಾವುದೇ ವಿಭಾಗದಲ್ಲಿ ಗುತ್ತಿಗೆದಾರರು ಡಿಫಾಲ್ಟರ್ ಆಗಿದ್ದರೆ ಅಂತಹವರು ಟೆಂಡರ್‌ನಲ್ಲಿ ಭಾಗವಹಿಸಲು ಅರ್ಹರಾಗಿರುವುದಿಲ್ಲ.

16. ಗುತ್ತಿಗೆದಾರರು ನೇಮಿಸಿಕೊಳ್ಳುವ ಕೆಲಸಗಾರರಿಗೆ ಸರ್ಕಾರದ ನಿಯಮದಂತೆ ಮಜೂರಿ ಮತ್ತಿತರ ಅನುಕೂಲಗಳನ್ನು ಸ್ವತಃ ಗುತ್ತಿಗೆದಾರರೇ ವಹಿಸಿಕೊಳ್ಳಬೇಕು. ಇಲಾಖೆಯು ಗುತ್ತಿಗೆದಾರರ ಮತ್ತು ಅವರ ನೌಕರರ ಯಾವುದೇ ಕಷ್ಟ ಇತ್ಯಾದಿಗಳಿಗೆ ಜವಾಬ್ದಾರರಲ್ಲ.

17. ಟೆಂಡರ್‌ನಲ್ಲಿ ನಮೂದಿಸಿದ ಹಣವು ಅಂದಾಜು ದರವಾಗಿರುತ್ತದೆ. (ಅಪ್ರಾಕ್ಸಿಮೇಟ್) ಹಣವನ್ನು ಪಾವತಿಸುವಾಗ ಮಂಜೂರಾದ ಅಂದಾಜು ಪಟ್ಟಿಯಂತೆ ಹಣ ಪಾವತಿಸಲಾಗುವುದು.

18. ಕಾಮಗಾರಿಯನ್ನು ಅರಣ್ಯ ಇಲಾಖೆಯಿಂದ ಪರಿಶೀಲಿಸಿ ಮಂಜೂರಾದ ಅಂದಾಜು ಪಟ್ಟಿಯ ಅನುಗುಣವಾಗಿ ಮಾಡಬೇಕಾಗಿರುತ್ತದೆ. ಕಾಮಗಾರಿಯ ಗುಣಮಟ್ಟವು ವಲಯ ಅರಣ್ಯಾಧಿಕಾರಿ, ಸಹಾಯಕ ಅರಣ್ಯಾಧಿಕಾರಿಗಳು ಇವರು ಕಾಲಕಾಲಕ್ಕೆ ನೀಡುವ ಲಿಖಿತ/ಮೌಖಿಕ ಆದೇಶಕ್ಕನುಗುಣವಾಗಿ ಇರತಕ್ಕದ್ದು. ಕೆಲಸಗಳಲ್ಲಿ ಏನಾದರೂ ಪರಿವರ್ತನೆ ಅಥವಾ ಮಾರ್ಪಾಡು ಮಾಡುವುದು ಅವಶ್ಯವೆಂದು ಕಂಡುಬಂದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಲಿಖಿತ ಆದೇಶದ ಮೇರೆಗೆ ಅಂತಹ ಪರಿವರ್ತನೆ ಅಥವಾ ಮಾರ್ಪಾಡುಗಳನ್ನು ಮಂಜೂರಾದ ದರದಲ್ಲಿಯೇ ಮಾಡಲು ಗುತ್ತಿಗೆದಾರರು ಬದ್ಧರಾಗಿರಬೇಕಾಗಿರುತ್ತದೆ.

19. ವಲಯ ಅರಣ್ಯಾಧಿಕಾರಿ ಮತ್ತು ಸಹಾಯಕ ಅರಣ್ಯ ಅಧಿಕಾರಿಗಳ ನಿರ್ದೇಶನದಂತೆ ಕಾಮಗಾರಿಗಳನ್ನು ಪೂರ್ಣಗೊಳಿಸತಕ್ಕದ್ದು. ಗುತ್ತಿಗೆಯ ಅವಧಿಯನ್ನು ಸಾಮಾನ್ಯವಾಗಿ ವಿಸ್ತರಿಸಲಾಗುವುದಿಲ್ಲ. ನಿಗದಿತ ಅವಧಿಯಲ್ಲಿ ಕಾಮಗಾರಿಗಳನ್ನು ಪೂರ್ಣಗೊಳಿಸತಕ್ಕದ್ದು. ಅತಿ ವಿಶೇಷ ಸಂದರ್ಭಗಳು ಬಂದಲ್ಲಿ ವಿಸ್ತರಣಾ ಅವಧಿಯಲ್ಲಿ ಮಾಡಿದ ಕೆಲಸಗಳಿಗೆ ಗುತ್ತಿಗೆ ದರಗಳಲ್ಲಿ ಶೇ. 5 ರಂತೆ ಕಡಿತದೊಂದಿಗೆ ಅವಧಿಯನ್ನು ವಿಸ್ತರಿಸುವ ಅಧಿಕಾರವನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಯವರು ಹೊಂದಿರುತ್ತಾರೆ. ವಲಯ ಅರಣ್ಯ ಅಧಿಕಾರಿ ಮತ್ತು ಸಹಾಯಕ ಅರಣ್ಯ ಅಧಿಕಾರಿರವರು ನೀಡಿದ ನಿರ್ದೇಶನದಂತೆ ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸದಿದ್ದಲ್ಲಿ ಅಂತಹ ಕಾಮಗಾರಿಗಳಿಗೆ ಹಣವನ್ನು ಪಾವತಿಸಲಾಗುವುದಿಲ್ಲ ಮತ್ತು ಇಎಂಡಿ ಹಾಗೂ ಭದ್ರತಾ ಠೇವಣಿಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

20. ಟೆಂಡರ್‌ನ್ನು ಕಂಪನಿಯ ವತಿಯಿಂದ/ಸಂಘ ಸಂಸ್ಥೆಗಳು ಕೊಡುವ ಪಕ್ಷದಲ್ಲಿ

ಅ) ಕಂಪನಿಯ/ಸಂಘ ಸಂಸ್ಥೆಗಳ ನೋಂದಾಯಿತ ಸಂಸ್ಥೆಗಳಾಗಿರಬೇಕು.

ಆ) ಕಂಪನಿಯ ಎಲ್ಲಾ ಪಾಲುದಾರರಿಗೆ ಟೆಂಡರನ್ನು ಸಹಿ ಮಾಡಲು ಸಾಧ್ಯವಾಗದಿದ್ದಲ್ಲಿ ಟೆಂಡರ್ ಸಹಿ ಮಾಡುವ ವ್ಯಕ್ತಿಯು ಈ ಬಗ್ಗೆ ಅಧಿಕಾರ ಪತ್ರ (Power of Attorney) ಪಡೆದುಕೊಂಡಿರಬೇಕು. ಇಂತಹ ಪತ್ರವನ್ನು ಟೆಂಡರ್‌ಗೆ ಲಗತ್ತಿಸಬೇಕು.

21. ಅರಣ್ಯ ಕೂಲಿಕಾರರ ಸಹಕಾರ ಸಂಘಗಳು ಈ ಕೆಲಸಗಳಿಗೆ ಟೆಂಡರ್ ಕೊಡಲು ಇಚ್ಛಿಸಿದಲ್ಲಿ ಇಎಂಡಿ ಮತ್ತು ಭದ್ರತಾ ಠೇವಣಿಯನ್ನು ಕಡ್ಡಾಯವಾಗಿ ನೀಡಬೇಕಾಗುವುದು ಹಾಗೂ ಸಂಘಗಳ ನೋಂದಣಿ ನಿಯಮದಂತೆ ಸಂಘಗಳು ಕಡ್ಡಾಯವಾಗಿ ನೋಂದಣಿಯಾಗಿರಬೇಕು. ಇಲ್ಲವಾದಲ್ಲಿ ಟೆಂಡರನ್ನು ತಿರಸ್ಕರಿಸಲಾಗುವುದು.

22. ಯಶಸ್ವಿ ಟೆಂಡರ್‌ದಾರರು ಕರಾರು ನಾಮೆಯನ್ನು ಸಹಿ ಮಾಡಿದ ನಂತರ ಟೆಂಡರನ್ನು ಹಿಂತೆಗೆದುಕೊಂಡಲ್ಲಿ ನಿಗದಿತ ಸಮಯದಲ್ಲಿ ಕಾಮಗಾರಿ ಪ್ರಾರಂಭಿಸದಿದ್ದಲ್ಲಿ, ಕಾಮಗಾರಿಯ ಬಗ್ಗೆ ನಿರಾಸಕ್ತಿ ಹೊಂದಿದಲ್ಲಿ ಟೆಂಡರ್‌ದಾರರ ಇಎಂಡಿ ಮತ್ತು ಭದ್ರತಾ ಠೇವಣಿಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದಲ್ಲದೇ ಗುತ್ತಿಗೆ ಕೆಲಸವನ್ನು ಮೂಲ ಗುತ್ತಿಗೆದಾರರ ಖರ್ಚು ಮತ್ತು ಜವಾಬ್ದಾರಿಯ ಮೇಲೆ ಮರು ಟೆಂಡರ್ ಮಾಡಲಾಗುವುದು. ಟೆಂಡರ್‌ಗೆ ಕಾಲಾವಕಾಶ ಇಲ್ಲದಿದ್ದಲ್ಲಿ ಇಲಾಖೆಯಿಂದ ಕಾಮಗಾರಿಯನ್ನು ಪೂರ್ಣಗೊಳಿಸಿ ಸರ್ಕಾರಕ್ಕೆ ಹಾನಿಯಾದ ಮೊತ್ತವನ್ನು ಕರ್ನಾಟಕ ಅರಣ್ಯ ಸಂಹಿತೆ 1963 ಕಾಲಂ 109 ಮತ್ತು 119 ರಂತೆ ಭೂಕಂದಾಯ ಬಾಕಿ ವಸೂಲಿಯಂತೆ ವಸೂಲು ಮಾಡಲಾಗುವುದು.
23. ಯಶಸ್ವಿ ಬಿಡ್ಡುದಾರರು ಕಾಮಗಾರಿಗಳನ್ನು ಪೂರ್ಣಗೊಳಿಸಿದ ನಂತರ ಹಣ ಪಾವತಿಸುವಾಗ ಬಿಲ್ಲಿನ ಮೊತ್ತದ ಶೇ. 5ರಷ್ಟು ಮೊತ್ತವನ್ನು ಭದ್ರತಾ ಠೇವಣಿಯಾಗಿ ಹಿಡಿಯಲಾಗುವುದು. ಈ ಹಣವನ್ನು ನೆಡುತೋಪು ನಿರ್ಮಾಣ ಬಗ್ಗೆ ವಲಯ ಅರಣ್ಯಾಧಿಕಾರಿಗಳು ಮತ್ತು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳಿಂದ ದೃಢೀಕರಣ ಪತ್ರ ನೀಡಿದ ನಂತರ ಭದ್ರತಾ ಠೇವಣಿ ಮೊತ್ತವನ್ನು ಹಿಂದಿರುಗಿಸಲಾಗುವುದು.
24. ಕೆಲಸ ಪೂರ್ಣಗೊಂಡ ದಿನಾಂಕದಂದು 1 ವರ್ಷದ ಒಳಗಾಗಿ ಕಾಮಗಾರಿಯಲ್ಲಿ ಯಾವುದೇ ದೋಷ ಕಂಡುಬಂದಲ್ಲಿ ಗುತ್ತಿಗೆದಾರರು ತಮ್ಮ ಸ್ವಂತ ಖರ್ಚಿನಲ್ಲಿ ದೋಷ ಪರಿಹರಿಸಬೇಕಾಗುತ್ತದೆ. ನಂತರ ಭದ್ರತಾ ಠೇವಣಿ ಹಿಂತಿರುಗಿಸಲಾಗುವುದು. ತಪ್ಪಿದಲ್ಲಿ ಭದ್ರತಾ ಠೇವಣಿಯಲ್ಲಿ ಸದರಿ ಖರ್ಚನ್ನು ಭರಿಸಲಾಗುವುದು.
25. ಗುತ್ತಿಗೆದಾರರು ನೇಮಿಸಿಕೊಂಡಿರುವ ಕೂಲಿ ಕಾರ್ಮಿಕರಿಗೆ ಅಪಘಾತ/ಇನ್ನಿತರೆ ಹಾನಿಗಳು ಸಂಭವಿಸಿದಲ್ಲಿ ನಷ್ಟ ಪರಿಹಾರವನ್ನು ಗುತ್ತಿಗೆದಾರರೇ ನೀಡಬೇಕಾಗುತ್ತದೆ.
26. ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಲಿಖಿತ ಅನುಮತಿ ಇಲ್ಲದೇ ಯಾವುದೇ ಕೆಲಸವನ್ನು ಟೆಂಡರುದಾರರು ಪ್ರಾರಂಭಿಸಬಾರದು.
27. ಟೆಂಡರ್ ಫಾರಂ ನೀಡುವ ದಿನಗಳಲ್ಲಿ ಗುತ್ತಿಗೆದಾರರ ನೋಂದಣಿಯನ್ನು ಮಾಡಲಾಗುವುದಿಲ್ಲ.
28. ಕಾಲ ಕಾಲಕ್ಕೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ ವಿಭಾಗ, ಇವರು ವಿಧಿಸುವ ಷರತ್ತಿಗೆ ಗುತ್ತಿಗೆದಾರರು ಬದ್ಧರಾಗಿರಬೇಕು.

ಪಿ.ಆರ್. 371 ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು.

**ಆಯುಕ್ತರವರ ಕಾರ್ಯಾಲಯ, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಅ 2ನೇ ಮಹಡಿ, ವಿಶ್ವೇಶ್ವರಯ್ಯ ಚಿಕ್ಕ ಗೋಪುರ, ಡಾ: ಬಿ.ಆರ್. ಅಂಬೇಡ್ಕರ್ ರಸ್ತೆ, ಬೆಂಗಳೂರು –560 001**

**ಅಧಿಸೂಚನೆ**

**ಪ್ರಕಟಣೆ ಸಂಖ್ಯೆ ಆಪಸಂ/ಸಿಬ್ಬಂದಿ–2/ವಿವ–97/2008–09, ಬೆಂಗಳೂರು, ದಿನಾಂಕ: 27ನೇ ಮೇ 2009**

**ಭರ್ತಿಮಾಡಿದ ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಲಾದ ಕೊನೆಯ ದಿನಾಂಕ: 15.06.2009**

**ವಿಷಯ:** ರಾಜ್ಯದ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯ ಪಶು ಚಿಕಿತ್ಸಾಲಯಗಳಲ್ಲಿ ಹಾಲಿ ಖಾಲಿಯಿರುವ 16 ಪಶುವೈದ್ಯಾಧಿಕಾರಿಗಳ ಹುದ್ದೆಗಳನ್ನು ಗುತ್ತಿಗೆ ಆಧಾರದ ಮೇಲೆ ನಿವೃತ್ತ ಪಶುವೈದ್ಯರನ್ನು ಸಂಚಿತ ವೇತನ ಆಧಾರದ ಮೇಲೆ ಮರು ನೇಮಕಾತಿ ಮಾಡುವ ಕುರಿತು.

ಸರ್ಕಾರದ ಆದೇಶ ಸಂ. ಪಸಂಮೀ/116/ಪಸಸೇ/2008 ದಿನಾಂಕ: 07.02.2009 ಅನುಮತಿಯನ್ವಯ 16 ಪಶುವೈದ್ಯಾಧಿಕಾರಿಗಳ ಹುದ್ದೆಗಳನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ–15ರ ಪ್ರಕಾರ 65 ವರ್ಷ ವಯೋಮಿತಿಯೊಳಗಿನ ನಿವೃತ್ತಿ ಹೊಂದಿದ ಪಶುವೈದ್ಯರನ್ನು ಗುತ್ತಿಗೆ ಆಧಾರದ ಮೇಲೆ ತಿಂಗಳಿಗೆ ರೂ. 12,000/– (ಹನ್ನೆರಡು ಸಾವಿರ ರೂ.ಗಳು ಮಾತ್ರ) ಸಂಚಿತ ವೇತನದಲ್ಲಿ 2 (ಎರಡು) ವರ್ಷಗಳ ಅವಧಿಗೆ ಆಯ್ಕೆಗಾಗಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಈ ಪ್ರಕಟಣೆಯಲ್ಲಿ ಸೂಚಿಸಿರುವ ನಮೂನೆಯಲ್ಲಿ ಬೆರಳಚ್ಚುಮಾಡಿದ / ಗಣಕೀಕೃತ ಅರ್ಜಿಗಳನ್ನು ಸ್ವೀಕರಿಸಲಾಗುವುದು. ಕೈಬರಹದ / ಜೆರಾಕ್ಸ್ ಅಥವಾ ಇತರೇ ಯಾವುದೇ ಆಯೋಗದ ಅರ್ಜಿಗಳನ್ನು ಒಪ್ಪುವುದಿಲ್ಲ. ಇಲಾಖೆಯಲ್ಲಿ ಗ್ರಾಮೀಣ ಸ್ಥಳಗಳಲ್ಲಿ ಖಾಲಿಯಿರುವ ಹುದ್ದೆಗಳಿಗೆ ಆದ್ಯತೆ ನೀಡಿ 13 (ಹದಿಮೂರು) ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ನೇಮಕಾತಿ ಮಾಡಲಾಗುವುದು.

1. **ನಿಗದಿತ ವಿದ್ಯಾರ್ಹತೆ:** ಅಭ್ಯರ್ಥಿಯು ಬಿ.ವಿ.ಎಸ್‌ಸಿ./ಬಿ.ವಿ.ಎಸ್‌ಸಿ ಅಂಡ್ ಎಹೆಚ್ ಪದವಿಯನ್ನು ಪಡೆದಿರಬೇಕು ಹಾಗೂ ಭಾರತೀಯ ಪಶುವೈದ್ಯಕೀಯ ಪರಿಷತ್ತಿನ ಕಾಯ್ದೆ 1984ರ ಅಡಿಯಲ್ಲಿ ನೋಂದಣಿಯಾಗಿರಬೇಕು.
2. ಕನ್ನಡ ಭಾಷೆಯನ್ನು ಓದಲು ಮತ್ತು ಬರೆಯಲು ಕಡ್ಡಾಯವಾಗಿ ತಿಳಿದಿರಬೇಕು.
3. **ವಯೋಮಿತಿ:** ಅಭ್ಯರ್ಥಿಗಳಿಂದ ಪೂರ್ಣಗೊಳಿಸಿದ ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಅಂತಿಮ ದಿನಾಂಕದಂದು ಗರಿಷ್ಠ 64 ವಯೋಮಿತಿಯನ್ನು ಮೀರಿರಬಾರದು.
4. ಅರ್ಜಿಯೊಂದಿಗೆ ಲಗತ್ತಿಸಬೇಕಾದ ದೃಢೀಕೃತ ಜೆರಾಕ್ಸ್ ದಾಖಲಾತಿಗಳು:–

   (i) (ಎ) ಬಿ.ವಿ.ಎಸ್‌ಸಿ./ಬಿ.ವಿ.ಎಸ್‌ಸಿ ಅಂಡ್ ಎಹೆಚ್ ಪದವಿಯ ಅಂಕಪಟ್ಟಿಗಳು

(ii) ಚಾಲ್ತಿಯಲ್ಲಿರುವ ಪಶುವೈದ್ಯಕೀಯ ಪರಿಷತ್ತಿನ ನೋಂದಣಿ ಪ್ರಮಾಣ ಪತ್ರ
(iii) ಘಟಿಕೋತ್ಸವ ಪದವಿ ಪ್ರಮಾಣ ಪತ್ರ
(iv) ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪ್ರಮಾಣ ಪತ್ರ / ವರ್ಗಾವಣೆ ಪ್ರಮಾಣ ಪತ್ರ / ಕ್ಯುಮ್ಯುಲೇಟೀವ್ ರೆಕಾರ್ಡ್‌ನ ಪ್ರಮಾಣೀಕೃತ ಉದ್ಧೃತ ಭಾಗ
(v) ಅರ್ಜಿಯಲ್ಲಿ ಇತ್ತೀಚಿನ ಪಾಸ್ ಪೋರ್ಟ್ ಸೈಜಿನ ಎರಡು ಭಾವಚಿತ್ರಗಳನ್ನು ಅಂಟಿಸಿರಬೇಕು.
(vi) ಸೇವೆಯಿಂದ ನಿವೃತ್ತಿಹೊಂದಿರುವ ಕುರಿತು ದಾಖಲೆ ಹಾಗೂ ಪ್ರಸ್ತುತ ಪಡೆಯುತ್ತಿರುವ ನಿವೃತ್ತಿ ವೇತನ, ಪ್ಯಾನ್ ಸಂಖ್ಯೆ., ಪಿ.ಪಿ.ಒ. ಸಂಖ್ಯೆ, ಪಿಂಚಣಿ ಪಡೆಯುತ್ತಿರುವ ಬ್ಯಾಂಕ್ ಖಾತೆ ವಿವರ (ಪಿಂಚಣಿ ಅಂದರೆ, ಕಮ್ಯುಟೇಷನ್ ಮೊಬಲಗು ಸೇರಿದಂತೆ ಅರ್ಜಿಯಲ್ಲಿ ಸೂಚಿಸತಕ್ಕದ್ದು).

5. ಅಭ್ಯರ್ಥಿಗಳು ಭರ್ತಿಮಾಡಿದ ಅರ್ಜಿಗಳನ್ನು ಎಲ್ಲಾ ಸಂಬಂಧಿಸಿದ ದಾಖಲಾತಿಗಳು / ಅಂಕಪಟ್ಟಿಗಳ ದ್ವಿಪ್ರತಿಗಳೊಂದಿಗೆ ಖುದ್ದಾಗಿ ಅಥವಾ ನೋಂದಣಿ ಅಂಚೆ ಮುಖಾಂತರ **ದಿನಾಂಕ: 15.06.2009 ರ ಸಂಜೆ 5.00 ಘಂಟೆಯೊಳಗೆ** 'ಆಯುಕ್ತರು, ಪಶುಸಂಗೋಪನೆ ಮತ್ತು ಪಶುವೈದ್ಯ ಸೇವಾ ಇಲಾಖೆ, 2ನೇ ಮಹಡಿ, ವಿಶ್ವೇಶ್ವರಯ್ಯ ಚಿಕ್ಕ ಗೋಪುರ, ಬೆಂಗಳೂರು-1' ಇವರಿಗೆ ತಲುಪುವಂತೆ ಸಲ್ಲಿಸತಕ್ಕದ್ದು. ಯಾವುದೇ ಕಾರಣದಿಂದಾಗಿ ಅರ್ಜಿಯು ಇಲಾಖೆಗೆ ತಡವಾಗಿ ತಲುಪಿದ್ದಕ್ಕಾಗಿ ಅಥವಾ ಅರ್ಜಿಯು ತಲುಪದೇ ಇರುವುದಕ್ಕೆ ಈ ಇಲಾಖೆಯು ಜವಾಬ್ದಾರಿಯಾಗಿರುವುದಿಲ್ಲ. ನಿಗಧಿತ ದಿನಾಂಕ ಮುಗಿದ ನಂತರ ಸಲ್ಲಿಸಿದ ಮೇಲ್ಕಂಡ ಅವಶ್ಯಕ ದಾಖಲೆಗಳನ್ನು ಅರ್ಜಿಯೊಂದಿಗೆ ಲಗತ್ತಿಸದ ಮತ್ತು ಅರ್ಜಿಯ ನಿಗದಿತ ಅಂಕಣಗಳಲ್ಲಿ ಸಹಿ ಮಾಡದಿರುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು. ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ದಿನಾಂಕವು ಬಂದ್/ಮುಷ್ಕರ ರಜೆಯಾಗಿದ್ದಲ್ಲಿ ಮಾರನೆಯ ದಿನವು ಕೊನೆಯ ದಿನಾಂಕವಾಗಿರುತ್ತದೆ.

6. ಅರ್ಜಿಗಳನ್ನೊಳಗೊಂಡ ಲಕೋಟೆಯ ಮೇಲೆ **"ಗುತ್ತಿಗೆ ಆಧಾರದ ಮೇಲೆ ನಿವೃತ್ತ ಪಶುವೈದ್ಯಾಧಿಕಾರಿಗಳ ಸಂಚಿತ ವೇತನದ ಆಧಾರದ ಮೇಲೆ ಮರುನೇಮಕಾತಿ ಕುರಿತು ಅರ್ಜಿ"** ಎಂದು ದಪ್ಪ ಅಕ್ಷರಗಳಲ್ಲಿ ಬರೆಯತಕ್ಕದ್ದು. ಖುದ್ದಾಗಿ ಅರ್ಜಿಗಳನ್ನು ಸಲ್ಲಿಸುವ ಅಭ್ಯರ್ಥಿಗಳು ಸ್ವೀಕೃತಿ ಪಡೆಯತಕ್ಕದ್ದು.

ಆಯುಕ್ತರು
ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು-1

**Office of the Commissioner, Animal Husbandry & Veterinary Services, 2th Floor,**
**Sir. M. Vishveshwaraya Mini Tower, Dr. B.R. Ambedkar Road, Bangalore – 560 001**
**ಆಯುಕ್ತರವರ ಕಾರ್ಯಾಲಯ, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, 2ನೇ ಮಹಡಿ,**
**ಸರ್.ಎಂ. ವಿಶ್ವೇಶ್ವರಯ್ಯ ಚಿಕ್ಕ ಗೋಪುರ, ಡಾ: ಬಿ.ಆರ್. ಅಂಬೇಡ್ಕರ್ ರಸ್ತೆ, ಬೆಂಗಳೂರು – 560 001**

## APPLICATION FOR RE-APPOINTMENT OF RETIRED VETERINARY OFFICERS ON CONTRACT BASIS AT CONSOLIDATED PAY

## ಗುತ್ತಿಗೆ ಆಧಾರದ ಮೇಲೆ ಸಂಚಿತ ವೇತನದಲ್ಲಿ ನಿವೃತ್ತ ಪಶುವೈದ್ಯರ ಮರು ನೇಮಕಾತಿಗಾಗಿ ಅರ್ಜಿ ನಮೂನೆ

**ವಿ.ಸೂ:** 1. ಅರ್ಜಿಯೊಂದಿಗೆ ನೀಡಿರುವ ತಾಳೆಪಟ್ಟಿಯಲ್ಲಿದ್ದಂತೆ ದಾಖಲಾತಿಗಳನ್ನು ಲಗತ್ತಿಸಲು ಮರೆಯದಿರಿ.
2. ಗಣಕೀಕರಿಸುವುದರಿಂದ ಅರ್ಜಿಯನ್ನು ಮಡಚುವುದು, ಕೊಳೆ ಮಾಡುವುದನ್ನು ತಪ್ಪಿಸಿ.

Paste your recent passport size photograph duly signed within this box only (Do not pin or staple) (Please affix your signature in the box below)

NOTIFICATION NO. & DATE: ____________________
ಅಧಿಸೂಚನೆ ಸಂಖ್ಯೆ ಮತ್ತು ದಿನಾಂಕ: ____________________

POST APPLIED FOR ____________________
(indicate here the post and department)
ಅರ್ಜಿ ಹಾಕಿದ ಹುದ್ದೆ ಮತ್ತು ಇಲಾಖೆಯ ಹೆಸರು: ____________________

1. Name : (In capitals as in SSLC or X standard marks card)
ಅಭ್ಯರ್ಥಿಯ ಹೆಸರು (ದಪ್ಪ ಅಕ್ಷರಗಳಲ್ಲಿ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರದಲ್ಲಿ ನಮೂದಿಸಿರುವಂತೆ)

2. Father's name / Husband's Name (Strikeout whichever is not applicable)
ತಂದೆಯವರ / ಪತಿಯ ಹೆಸರು: (ಅನ್ವಯಿಸದಿರುವುದನ್ನು ಹೊಡೆದುಹಾಕಿ)

3. Postal address : (In capitals)
ಅಂಚೆ ವಿಳಾಸ (ದಪ್ಪ ಅಕ್ಷರಗಳಲ್ಲಿ)

| | |
|---|---|
| | |
| | |
| | |
| PHONE NO. | PIN CODE |

4. Permanent address: (In capitals)
ಖಾಯಂ ವಿಳಾಸ (ದಪ್ಪ ಅಕ್ಷರಗಳಲ್ಲಿ)

| | |
|---|---|
| | |
| | |
| | |
| PHONE NO. | PIN CODE |

5. Date of birth: (As in SSLC or equivalent examination certificate)
ಜನ್ಮ ದಿನಾಂಕ: (ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆ ಪ್ರಮಾಣ ಪತ್ರದಲ್ಲಿ ನಮೂದಿಸಿರುವಂತೆ)

| | | | |
|---|---|---|---|
| Day<br>ದಿನ | Month<br>ತಿಂಗಳು | Year<br>ವರ್ಷ | Age*<br>ವಯಸ್ಸು* |

*In case you claim age relaxation, mention the relevant provisions for details see the Notification.

6. Gender : Write 'M' for Male 'F' for Female
ಲಿಂಗ: ಸ್ತ್ರೀ / ಪುರುಷ ಎಂಬುದು ನಮೂದಿಸುವುದು.

7. Date / Year of Retirement / Pan No. / Bank a/c No. / P.P.O. No.
ನಿವೃತ್ತಿ ಹೊಂದಿದ ದಿನಾಂಕ / ವರ್ಷ / ಪ್ಯಾನ್ ಸಂ. / ಬ್ಯಾಂಕ್ ಖಾತೆ ಸಂ. / ಪಿ.ಪಿ.ಒ. ಸಂ.

8. Interested places for working:
ಕರ್ತವ್ಯ ನಿರ್ವಹಿಸಲು ಇಚ್ಛಿಸಿರುವ ಸ್ಥಳ:

1.
2.
3.

9. Do you possess the prescribed educational qualification, if so, furnish the details below:-
ನಿಗದಿತ ಶೈಕ್ಷಣಿಕ ವಿದ್ಯಾರ್ಹತೆಯ ವಿವರಗಳು:–

| Qualification<br>ವಿದ್ಯಾರ್ಹತೆ | Overall percentage of marks<br>ಗಳಿಸಿದ ಅಂಕಗಳು | Year of passing<br>ತೇರ್ಗಡೆ ಹೊಂದಿದ ವರ್ಷ | University/Board<br>ಸಂಬಂಧಪಟ್ಟ ವಿಶ್ವವಿದ್ಯಾನಿಲಯ |
|---|---|---|---|
| | | | |

10. Have you registered with Veterinary Council (with Reg. No.)
ಪಶುವೈದ್ಯಕೀಯ ಪರಿಷತ್‌ನಲ್ಲಿ ನೊಂದಯಿಸಲಾಗಿದೆಯೇ?(ರಿಜಿಸ್ಟರ್ ಸಂಖ್ಯೆಯೊಂದಿಗೆ)

| Yes | No |
|---|---|
| ಹೌದು | ಇಲ್ಲ |

11. Do you know Kannada language?
ಕನ್ನಡ ಭಾಷೆ ಅರಿತಿರುವಿರಾ?

| Yes | No |
|---|---|
| ಹೌದು | ಇಲ್ಲ |

If Yes
ಹೌದಾದರೆ

| Read | Write |
|---|---|
| ಓದಲು | ಬರೆಯಲು |

## DECLARATION
## ಘೋಷಣೆ

1. I hereby declare that all contents made in this application are true, complete and correct to the best of my knowledge and belief. In the event of any information being found false or ineligibility being detected before or after the selection action can be taken against me, by the Commissioner, Animal Husbandry & Veterinary Services, Bangalore.

ನಾನು ಈ ಅರ್ಜಿಯಲ್ಲಿ ನಮೂದಿಸಿರುವ ಎಲ್ಲ ಹೇಳಿಕೆ/ಮಾಹಿತಿಗಳು ಸತ್ಯವಾಗಿರುತ್ತೆ ಎಂದು ಹಾಗೂ ಸರಿಯಾಗಿರುತ್ತದೆ ಎಂದು ಘೋಷಿಸುತ್ತೇನೆ. ಈ ಮೇಲೆ ತಿಳಿಸಿದ ಯವುದೇ ಮಾಹಿತಿಗಳು ಸರಿಯಾಗಿಲ್ಲವೆಂದು ಕಂಡುಬಂದಲ್ಲಿ ಆಯುಕ್ತರು, ಪಶುಪಾಲನಾ ಇಲಾಖೆ, ಬೆಂಗಳೂರು ಕೈಗೊಳ್ಳುವ ಕ್ರಮಕ್ಕೆ ನಾನು ಬದ್ಧನಾಗಿರುತ್ತೇನೆ.

2. I further declare that I fulfill all the eligibility conditions regarding age, educational qualifications claimed.
ನಾನು ಹುದ್ದೆಗೆ ನಿಗದಿಪಡಿಸಲಾದ ವಿದ್ಯಾರ್ಹತೆ, ವಯೋಮಿತಿ ಮತ್ತು ಕೋರಿದ ಎಲ್ಲ ನಿಬಂಧನೆಗಳನ್ನು ಈಡೇರಿಸಿದ್ದೇನೆಂದು ಘೋಷಿಸುತ್ತೇನೆ.

Place: Signature of the Candidate
(Application not signed by the candidate will be rejected)

ಸ್ಥಳ ಅಭ್ಯರ್ಥಿಯ ಸಹಿ
(ಅಭ್ಯರ್ಥಿಯ ಸಹಿ ಇಲ್ಲದ ಅರ್ಜಿಯನ್ನು ತಿರಸ್ಕರಿಸಲಾಗುವುದು)

ಪಿ.ಆರ್. 379

## ತೋಟಗಾರಿಕೆ ಇಲಾಖೆ

## ತೋಟಗಾರಿಕೆ ನಿರ್ದೇಶನಾಲಯ, ಲಾಲ್‌ಬಾಗ್, ಬೆಂಗಳೂರು–04

**ಪ್ರಕಟಣೆ ಸಂ/ತೋಇ/ತೋಜಂನಿ(ಹನೀ)/ಸತೋಅ–1/140/08–09, ದಿನಾಂಕ: 27ನೇ ಮೇ 2009**

**ವಿಷಯ:** 2009–10ನೇ ಸಾಲಿನ ಕೇಂದ್ರದ ಪುರಸ್ಕೃತ ಮೈಕ್ರೋ ಇರಿಗೇಷನ್ ಯೋಜನೆಯಡಿ ಹನಿ ನೀರಾವರಿ ಮತ್ತು ಸ್ಪ್ರಿಂಕ್ಲರ್ ಉಪಕರಣಗಳ ಉತ್ಪಾದಕರ ನೊಂದಣಿಗಾಗಿ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ ಮುಂದೂಡಿಕೆ ಬಗ್ಗೆ.

**ಉಲ್ಲೇಖ:** Notification ಸಂ.ತೋಇ/ತೋಜಂನಿ/ಹನಿ/ಸತೋಅ–1/140/08–09, ದಿ:4.5.09

2009–10ನೇ ಸಾಲಿನ ಕೇಂದ್ರ ಪುರಸ್ಕೃತ ಸೂಕ್ಷ್ಮ ಮೈಕ್ರೋ ಇರಿಗೇಷನ್ ಯೋಜನೆಯಡಿ ರಾಜ್ಯಾದ್ಯಂತ ರೈತರ ತಾಕಿನಲ್ಲಿ ಹನಿ ನೀರಾವರಿ ಮತ್ತು ಸ್ಪ್ರಿಂಕ್ಲರ್ ಉಪಕರಣ ಅಳವಡಿಸಲು ಕಂಪನಿ ಉತ್ಪಾದಕರಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದ್ದು, ಉಲ್ಲೇಖಿತ Notification ಅಲ್ಲಿ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕವನ್ನು 30.05.09 ರಿಂದ 15.06.09 ರವರೆಗೆ ಮುಂದೂಡಿಸಲಾಗಿದೆ. ಆಸಕ್ತಿಯುಳ್ಳವರು ತೋಟಗಾರಿಕೆ ಜಂಟಿ ನಿರ್ದೇಶಕರು (ಹನಿ ನೀರಾವರಿ) ಲಾಲ್‌ಬಾಗ್, ಬೆಂಗಳೂರು ಈ ಕಛೇರಿಯಿಂದ ನೊಂದಣಿ ಪ್ರಪತ್ರವನ್ನು ಮತ್ತು ನಿಬಂಧನೆಗಳ ವಿವರಗಳನ್ನು ಪಡೆಯಬಹುದು. ಅರ್ಜಿದಾರರು ಹನಿ ನೀರಾವರಿ ಮತ್ತು ಸ್ಪ್ರಿಂಕ್ಲರ್ ಕಾಂಪೋನೆಂಟ್‌ಗಳಿಗೆ ಪ್ರತ್ಯೇಕವಾಗಿ ಅರ್ಜಿ ಸಲ್ಲಿಸಬೇಕು. ನೋಂದಣಿ ಪ್ರಪತ್ರದ ಶುಲ್ಕ ರೂ.300/– ಮಾತ್ರ ಇದ್ದು, ಎಲ್ಲಾ ಕೆಲಸದ ದಿನಗಳಲ್ಲಿ ಬೆಳಿಗ್ಗೆ 10.00 ರಿಂದ ಸಂಜೆ 5.00 ರವರೆಗೆ ಪಡೆಯಬಹುದಾಗಿರುತ್ತದೆ. ನೋಂದಣಿ ಶುಲ್ಕ ಹನಿ ನೀರಾವರಿಗಾಗಿ ರೂ.30,000/– ಮತ್ತು ಸ್ಪ್ರಿಂಕ್ಲರ್‌ಗಾಗಿ ರೂ.25,000/– ಪಾವತಿಸಬೇಕು. ನೋಂದಣಿಗಾಗಿ ಅರ್ಜಿ ಸಲ್ಲಿಸಲು ದಿನಾಂಕ:15.06.09 ಕೊನೆಯ ದಿನವಾಗಿರುತ್ತದೆ.

ತೋಟಗಾರಿಕೆ ನಿರ್ದೇಶಕರು,
ಮತ್ತು ಮಿಷನ್ ನಿರ್ದೇಶಕರ ಪರವಾಗಿ ಕರ್ನಾಟಕ ರಾಜ್ಯ ತೋಟಗಾರಿಕೆ ಮಿಷನ್.

## DEPARTMENT OF HORTICULTURE

## Directorate of Horticulture, Lalbagh, Bangalore-4

## Notification

**No.DH/JDH/(Drip)/AHO/140/2008-09, Dated: 27th May 2009**

**Sub:** Postponement of last date for submission of applications for Registration of Drip irrigation & Sprinkler equipment Manufacturers for laying out Drip /Sprinkler system under Centrally Sponsored Scheme for Micro Irrigation for the year 2009-10.

**Ref:** Notification No.DH/JDH/Drip/HHO-1/140/08-09, Dtd:4.5.09

Applications are invited from reputed companies for registration of Drip irrigation & Sprinkler equipment manufacturers to install Drip /Sprinkler system in the farmer's field through out the state, under the Centrally sponsored Scheme on Micro Irrigation for the year 2009-10. The last date for submission of filled registration form is postponed from 30.05.09 to 15.6.09. The interested parties may obtain the registration forms and the terms and conditions from the office of Joint Director of Horticulture (Drip Irrigation) Lalbagh, Bangalore-4. The manufacturers have to apply separately for drip & sprinkler components. The fee for each registration form is Rs.300/- Regstration fee for Drip irrigation is

Rs.30,000/- and for Sprinkler Irrigation Rs.25,000/-. The registration forms may be obtained on all working days from 10 A.M to 5 P.M. The last date for submitted the filled registration forms is 15.6.09.

For Director of Horticulture & Mission Director

P.R. 374 Karnataka State Horticulture Mission.

**ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ನಿಯಮಿತ, ಶಿವಮೊಗ್ಗ**

**ಪ್ರಾದೇಶಿಕ ವ್ಯವಸ್ಥಾಪಕರ ಕಛೇರಿ, ಹೊನ್ನಾಳಿ ರಸ್ತೆ, ಶಿವಮೊಗ್ಗ, ದಿನಾಂಕ: 12ನೇ ಮೇ 2009**

**ಅಧಿಸೂಚನೆ**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಈ ಕೆಳಗೆ ನಮೂದಿಸಿದ ನಾಟ ಸಂಗ್ರಹಾಲಯಗಳಲ್ಲಿ ಲಭ್ಯವಿರುವ, ಸಾಗುವಾನಿ, ಹೊನ್ನೆ ಇತರೆ ಜಾತಿಯ ನಾಟಗಳು ಎಳೆಗಳು ಮತ್ತು ಸೌದೆ ಇತ್ಯಾದಿಯನ್ನು ಆಯಾ ಡಿಪೋವಿನ ಹೆಸರಿನ ಮುಂದೆ ಸೂಚಿಸಿದ ದಿನಾಂಕದಂದು ಬಹಿರಂಗ ಹರಾಜು ಮಾರಾಟದಲ್ಲಿ ವಿಕ್ರಯಿಸಲು ಸಾಮಾನ್ಯ ಅವಗಾಹನೆಗೆ ಪ್ರಕಟಿಸಿದೆ.

**ಹರಾಜಿಗಿಟ್ಟ ನಾಟ, ಪೋಲ್ಸ್, ಸೌದೆ, ಇತ್ಯಾದಿ ಅಂದಾಜು ಪ್ರಮಾಣ**

| ಕ್ರ. ಸಂ. | ಡಿಪೋದ ಹೆಸರು | ಹರಾಜು ದಿನಾಂಕ | ಸಾಗುವಾನಿ | | | ಹೊನ್ನೆ | ಇತರೆ ಜಾತಿ | |
|---|---|---|---|---|---|---|---|---|
| | | | ನಾಟ ಘ.ಮೀ. | ಪೋಲ್ಸ್ ಸಂಖ್ಯೆ | ಸೌದೆ ಘ.ಮೀ | ನಾಟ ಘ.ಮೀ | ನಾಟ ಘ.ಮೀ | ಸೌದೆ ಘ.ಮೀ |
| | ಕೆ.ಎಸ್.ಎಫ್.ಐ.ಸಿ.ಸಾಮಿಲ್ಸ್ ಹೊನ್ನಾಳಿ ರಸ್ತೆ ಶಿವಮೊಗ್ಗ | 15.6.2009 | 22.371 | 120 | 21.113 | 1.232 | 0.536 | 1.000 |

**ಟಿಪ್ಪಣಿ:** 1. ಈ ಮೇಲಿನ ಸರಕು ಪ್ರಮಾಣ ಅಂದಾಜು ಇರುತ್ತದೆ.

2. ಹರಾಜಿನ ಪ್ರಕ್ರಿಯೆ ಕರ್ನಾಟಕ ಅರಣ್ಯ ಇಲಾಖಾ ಕಾನೂನು ಹಾಗೂ ಷರತ್ತುಗಳಂತೆ ಇರುತ್ತದೆ.

3. ಮಾರಾಟದ ಅಧಿಸೂಚನೆಯ ಪ್ರತಿಗಳಿಗಾಗಿ ಸಂಬಂಧಪಟ್ಟ ಪ್ರಾದೇಶಿಕ ವ್ಯವಸ್ಥಾಪಕರ ಕಛೇರಿಯ ವೇಳೆಯಲ್ಲಿ (ರಜಾ ದಿನಗಳನ್ನು ಹೊರತುಪಡಿಸಿ) ಸಂಪರ್ಕಿಸುವುದು.

**ಕೆ.ಆರ್. ಬೇಗ್**

ಪ್ರಾದೇಶಿಕ ವ್ಯವಸ್ಥಾಪಕರು ಕರಾಅಕೈನಿಗಮ., ಶಿವಮೊಗ್ಗ.

**KARNATAKA STATE FOREST INDUSTRIES CORPORATION LIMITED., SHIMOGA**

**Office of the Regional Manager KSFIC Ltd., Shimoga**

**Notification**

**No. KSFIC Sawmill, TBR, Auction Sale 2009-10, Dated: 12th May 2009**

It is hereby notified for the information of general public that Teak, Honne & Other Kind Timber, Poles and Firewood etc., available in the following KSFIC Sawmill Shimoga will be sold in public Auction on the dates shown against each depot.

| Sl. No. | Name of the Depot | Date of sale | Teak | | | Honne | Other kind | |
|---|---|---|---|---|---|---|---|---|
| | | | Timber M3 | Poles No | Firewood M3 | Timber M3 | Timber M3 | Firewood |
| | KSFIC Ltd., Sawmill Yard Honnalli Road Shimoga | 15.6.2009 | 22.371 | 120 | 21.113 | 1.232 | 0.536 | 1.000 |

Note: 1. Quantities Shown above are approximate.

2. Karnataka Forest rules and Conditions apply for the sale

3. For Detailed sale Notification Please contact the concerned Regional Manager Karnataka State Forest industries Corporation Limited, Shimoga, during the office hours except govt holidays.

**K.R. BEIG**

P.D. 70 Regional Manager, KSFIC Ltd., Shimoga.

**ಅರಣ್ಯ ಇಲಾಖೆ**

**ಅರಣ್ಯ ಸಂರಕ್ಷಣಾಧಿಕಾರಿಗಳ ಕಚೇರಿ, ಚಾಮರಾಜನಗರ ವೃತ್ತ, ಚಾಮರಾಜನಗರ**

**ಅಧಿಸೂಚನೆ**

**ಸಂಖ್ಯೆ: ಎ2/ಸಿಬ್ಬಂದಿ/ಆನೆಸಿಬ್ಬಂದಿ/ವಿವ–24/2008–09, ದಿನಾಂಕ: 19ನೇ ಮೇ 2009**

**ಆನೆ ಕವಾಡಿ ಹುದ್ದೆಗೆ ನೇರ ನೇಮಕಾತಿ**

ಅರಣ್ಯ ಇಲಾಖೆಯಲ್ಲಿ 37 ಆನೆ ಕವಾಡಿ ಹುದ್ದೆಗಳಿಗೆ ಕರ್ನಾಟಕ ಅರಣ್ಯ ಇಲಾಖಾ ಸೇವೆಗಳು (ನೇಮಕಾತಿ) ನಿಯಮಗಳು, 2003 ರಂತೆ ಹಾಗೂ ಸರ್ಕಾರದ ಅಧಿಸೂಚನೆ FEE 258 FEG 2008 ದಿನಾಂಕ: 03–10–2008 ರಲ್ಲಿ ಹೊರಡಿಸಿರುವ ಕರಡು ನಿಯಮಗಳ (ಕರ್ನಾಟಕ ಅರಣ್ಯ ಇಲಾಖಾ ಸೇವೆಗಳು (ನೇಮಕಾತಿ) (ತಿದ್ದುಪಡಿ) ನಿಯಮಗಳು, 2008) ಪ್ರಕಾರ ನೇರ ನೇಮಕಾತಿಗಾಗಿ ಅರ್ಹ ಅಭ್ಯರ್ಥಿಗಳಿಂದ ನಿಗದಿತ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

ಅರ್ಹ ಅಭ್ಯರ್ಥಿಗಳು ಭರ್ತಿ ಮಾಡಿದ ಅರ್ಜಿಗಳನ್ನು ಅರಣ್ಯ ಸಂರಕ್ಷಣಾಧಿಕಾರಿಗಳು, ಚಾಮರಾಜನಗರ ವೃತ್ತ, ಚಾಮರಾಜನಗರ ಇಲ್ಲಿಗೆ **ದಿನಾಂಕ 20–06–2009 ರಂದು ಅಪರಾಹ್ನ 4.00** ಘಂಟೆ ಅಥವಾ ಅದಕ್ಕೂ ಮುಂಚಿತವಾಗಿ ಅಂಚೆ ಮೂಲಕ ಅಥವಾ ಖುದ್ದಾಗಿ ತಲುಪಿಸುವುದು.

**ವಿಶೇಷ ಸೂಚನೆ:** ಅಂಚೆ ಮೂಲಕ ಕೊನೆಯ ದಿನಾಂಕದ ನಂತರ ಸ್ವೀಕೃತವಾದ ಅರ್ಜಿಗಳನ್ನು ಯಾವುದೇ ಕಾರಣಕ್ಕೂ ಪರಿಗಣಿಸಲಾಗುವುದಿಲ್ಲ ಹಾಗೂ ಅಭ್ಯರ್ಥಿಗಳು ಭರ್ತಿ ಮಾಡಿದ ಅರ್ಜಿಗಳನ್ನು ಸಾಧಾರಣ ಅಂಚೆ ಮುಖಾಂತರ ಮಾತ್ರ ಮೇಲ್ಕಂಡ ಕಚೇರಿಗಳ ವಿಳಾಸಕ್ಕೆ ಕಳುಹಿಸಬಹುದು ಯಾವುದೇ ಕಾರಣಕ್ಕೂ ಕೊರಿಯರ್, ನೊಂದಾಯಿತ ಅಂಚೆ, ಇತ್ಯಾದಿ ವಿಧಾನಗಳ ಮುಖಾಂತರ ಕಳುಹಿಸಿದ ಅರ್ಜಿಗಳನ್ನು ಸ್ವೀಕರಿಸುವ ವ್ಯವಸ್ಥೆ ಇರುವುದಿಲ್ಲ. ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೇ ಕೆಲಸದ ದಿನವು ಅರ್ಜಿಯನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.

**1.0 ಹುದ್ದೆಗಳ ವಿವರ :**

**ಹುದ್ದೆಯ ಹೆಸರು: ಆನೆ ಕವಾಡಿ**

**ವೇತನ ಶ್ರೇಣಿ: ರೂ. 4800–100–6000–125–6500–150–7100–175–7275**

| ಕ್ರಸಂ. | ಅರಣ್ಯ ವಿಭಾಗಗಳು | ಹುದ್ದೆಗಳ ಸಂಖ್ಯೆ |
|---|---|---|
| 1 | ವನ್ಯಜೀವಿ ವಿಭಾಗ, ಚಾಮರಾಜನಗರ | 03 |
| 2 | ಹುಲಿಯೋಜನೆ ವಿಭಾಗ, ಬಂಡೀಪುರ | 06 |
| | **ಒಟ್ಟು** | **09** |

ಚಾಮರಾಜನಗರ ವನ್ಯಜೀವಿ ವಿಭಾಗದಲ್ಲಿನ 03 ಹುದ್ದೆಗಳ ಮೀಸಲಾತಿ ವರ್ಗೀಕರಣ:

| ಪ್ರವರ್ಗ | ಸಂಖ್ಯೆ | ಒಟ್ಟು |
|---|---|---|
| **ಸಾಮಾನ್ಯ ಅರ್ಹತೆ** | **1** | **1** |
| **ಪ.ಜಾ.** | 1 | 1 |
| **ಪ.ಪಂ** | 1 | 1 |
| **ಒಟ್ಟು** | **3** | **3** |

ಹುಲಿಯೋಜನೆ ವಿಭಾಗ, ಬಂಡೀಪುರದಲ್ಲಿನ 06 ಹುದ್ದೆಗಳ ಮೀಸಲಾತಿ ವರ್ಗೀಕರಣ:

| | **ಮೀಸಲಾತಿ** | | | |
|---|---|---|---|---|
| **ಪ್ರವರ್ಗ** | **ಇತರೆ** | **ಗ್ರಾಮೀಣ ಅಭ್ಯರ್ಥಿ** | **ಮಾಜಿ ಸೈನಿಕ** | **ಒಟ್ಟು** |
| **ಸಾಮಾನ್ಯ ಅರ್ಹತೆ** | 1 | – | – | 1 |
| **ಪ.ಜಾ.** | 1 | – | – | 1 |
| **ಪ.ಪಂ.** | 1 | – | – | 1 |
| **ಪ್ರವರ್ಗ I** | 1 | – | – | 1 |
| **ಪ್ರವರ್ಗ II (ಎ)** | 1 | – | – | 1 |
| **ಪ್ರವರ್ಗ III (ಎ)** | 1 | – | – | 1 |
| **ಒಟ್ಟು** | **6** | **–** | **–** | **6** |

**3.0 ಅರ್ಹತೆ ಮತ್ತು ನಿಬಂಧನೆ:**

**3.1 ಪೌರತ್ವ:** ಈ ಕೆಳಗೆ ಕಾಣಿಸಿದ ವ್ಯಕ್ತಿಗಳು ಮಾತ್ರ ನೇಮಕಾತಿ ಕೋರಿ ಅರ್ಜಿ ಸಲ್ಲಿಸಲು ಅರ್ಹರಾಗಿರುತ್ತಾರೆ.

ಅ) ಭಾರತದ ಪೌರ

ಆ) ಭಾರತದಲ್ಲಿ ಖಾಯಂ ಆಗಿ ನೆಲೆಸುವ ಉದ್ದೇಶದಿಂದ 1962ರ ಜನವರಿ 1ನೇ ದಿನಾಂಕಕ್ಕೆ ಮೊದಲು ಭಾರತಕ್ಕೆ ಬಂದಿರುವ ಟಿಬೆಟಿಯನ್ ನಿರಾಶ್ರಿತರು.

ಇ) ಭಾರತದಲ್ಲಿ ಖಾಯಂ ಆಗಿ ನೆಲೆಸುವ ಉದ್ದೇಶದಿಂದ ಪಾಕಿಸ್ತಾನ, ಮ್ಯಾನ್ಮಾರ್ (ಹಿಂದಿನ ಬರ್ಮಾ) ಶ್ರೀಲಂಕಾ, ಪೂರ್ವ ಆಫ್ರಿಕದ ರಾಷ್ಟ್ರಗಳಾದ ಕೆನ್ಯಾ, ಉಗಾಂಡಾ, ತಾಂಜಾನಿಯಾ ಸಂಯುಕ್ತ ಗಣರಾಜ್ಯ (ಹಿಂದಿನ ಟಾಂಗನಿಕಾ, ಜಂಜೀಬಾರ), ಝಾಂಬಿಯಾ, ಮಲಾವಿ, ಜೈರ್, ಇಥಿಯೋಪಿಯಾ ಅಥವಾ ವಿಯೆಟ್ನಾಂಗಳಿಂದ ವಲಸೆ ಬಂದ ಭಾರತೀಯ ಮೂಲದ ವ್ಯಕ್ತಿ.

**('ಆ' ಯಿಂದ 'ಇ' ವರೆಗೆ ಕಾಣಿಸಿರುವ ಅಭ್ಯರ್ಥಿಯು ವಲಸೆ ಬಂದ ಬಗ್ಗೆ ಅವರು ವಾಸಿಸುವ ಜಿಲ್ಲಾ ಸರಹದ್ದಿನ ಜಿಲ್ಲಾಧಿಕಾರಿ ಅಥವಾ ಜಿಲ್ಲಾ ನ್ಯಾಯಾಧೀಶರಿಂದ ಪ್ರಮಾಣ ಪತ್ರ ಪಡೆದು ಒಪ್ಪಿಸಬೇಕು. ಇಲ್ಲದ ಪಕ್ಷದಲ್ಲಿ ನೇಮಕಾತಿಗೆ ಅರ್ಹರಾಗುವುದಿಲ್ಲ)**

**ಈ) ಕರ್ನಾಟಕ ರಾಜ್ಯದ ವ್ಯಾಪ್ತಿಯ ಅಧಿಸೂಚಿತ ಅರಣ್ಯದೊಳಗೆ ವಾಸಿಸುವವರಾಗಿರತಕ್ಕದ್ದು.**

**3.2 ವಿದ್ಯಾರ್ಹತೆ:**

ಕನ್ನಡ ಭಾಷೆ ಮಾತನಾಡಲು ಮತ್ತು ತಿಳಿದುಕೊಳ್ಳಲು ಶಕ್ತರಾಗಿರಬೇಕು.

**3.3 ಅನುಭವ:**

**ಆನೆ ಸಾಕಣೆಯಲ್ಲಿ ಅನುಭವ ಹೊಂದಿರುವುದು ಕಡ್ಡಾಯವಾಗಿರುತ್ತದೆ.**

**3.4 ವಯೋಮಿತಿ :**

ಅಧಿಸೂಚನೆಯ ದಿನಾಂಕಕ್ಕೆ ಅಭ್ಯರ್ಥಿಯು **ಕನಿಷ್ಠ 18** ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು. ಅಧಿಸೂಚನೆಯ ದಿನಾಂಕಕ್ಕೆ ಗರಿಷ್ಠ ವಯೋಮಿತಿ ವಿವರಗಳು ಕೆಳಗಿನಂತಿದೆ:

| | |
|---|---|
| ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಪ್ರವರ್ಗ I | ಗರಿಷ್ಠ ವಯೋಮಿತಿ 40 ವರ್ಷಗಳು |
| ಪ್ರವರ್ಗ II A, II B, III A, III B | ಗರಿಷ್ಠ ವಯೋಮಿತಿ 28 ವರ್ಷಗಳು |
| ಇತರೆ | ಗರಿಷ್ಠ ವಯೋಮಿತಿ 25 ವರ್ಷಗಳು |

**3.5 ವೈದ್ಯಕೀಯ ಅರ್ಹತೆ:**

ಅಭ್ಯರ್ಥಿಗಳು ಸರ್ಕಾರಿ ವೈದ್ಯಾಧಿಕಾರಿಗಳಿಂದ ವೈದ್ಯಕೀಯ ತಪಾಸಣೆ ನಡೆಸಿಕೊಂಡು ಅವರಿಂದ ವೈದ್ಯಕೀಯ ದೃಢಪತ್ರ ಪಡೆದು ಸಂದರ್ಶನದ ವೇಳೆ ಸಲ್ಲಿಸತಕ್ಕದ್ದು.

**4.0 ಅರ್ಜಿ ನಮೂನೆ:**

ಈ ಅಧಿಸೂಚನೆಯೊಂದಿಗೆ ಪ್ರಕಟಿಸಿರುವ ಅರ್ಜಿ ನಮೂನೆಯಲ್ಲಿ ಅಭ್ಯರ್ಥಿಗಳು ಅರ್ಜಿಯನ್ನು ಬೆರಳಚ್ಚು/ಕಂಪ್ಯೂಟರ್ ಪ್ರಿಂಟ್ ಮಾಡಿಸಿ, ಭರ್ತಿ ಮಾಡಿದ ಅರ್ಜಿಯನ್ನು ಸಲ್ಲಿಸುವುದು.

**4.1 ಅರ್ಜಿಯ ಜೊತೆಗೆ ಸಲ್ಲಿಸಬೇಕಾದ ದಾಖಲೆಗಳು : (ದೃಢೀಕೃತ ಪ್ರತಿಗಳನ್ನು ಮಾತ್ರ ಸಲ್ಲಿಸುವುದು)**

- ಸ್ವವಿಳಾಸವಿರುವ 10 x 22 ಸೆ.ಮಿ. ಅಳತೆಯ ಒಂದು ಲಕೋಟೆ (ಅಂಚೆ ಚೀಟಿ ಅಂಟಿಸುವ ಅಗತ್ಯವಿಲ್ಲ).
  **ಸೂಚನೆ:–** ಮೂಲ ದಾಖಲಾತಿಗಳು, ಪ್ರಮಾಣ ಪತ್ರಗಳು ಇತ್ಯಾದಿಗಳನ್ನು ಅರ್ಜಿಯ ಜೊತೆ ಸಲ್ಲಿಸುವ ಅಗತ್ಯವಿಲ್ಲ.
- ಆನೆ ಸಾಕಣೆಯಲ್ಲಿ ಅನುಭವ ಹೊಂದಿರುವ ಬಗ್ಗೆ ವಲಯ ಅರಣ್ಯಾಧಿಕಾರಿ ಅಥವಾ ಅವರಿಗಿಂತ ಮೇಲ್ಪಟ್ಟ ಅಧಿಕಾರಿಗಳಿಂದ ಪಡೆದ ಪ್ರಮಾಣ ಪತ್ರದ ದೃಢೀಕೃತ ಪ್ರತಿ.
- ಕರ್ನಾಟಕ ರಾಜ್ಯ ವ್ಯಾಪ್ತಿಯ ಅಧಿಸೂಚಿತ ಅರಣ್ಯದೊಳಗೆ ವಾಸ ಮಾಡುವವರೆಂಬ ಬಗ್ಗೆ ಸಂಬಂಧಿಸಿದ ತಹಸೀಲ್ದಾರರಿಂದ ಪಡೆದ ದೃಢೀಕರಣ ಪತ್ರ..
- ಸರ್ಕಾರಿ ವೈದ್ಯಾಧಿಕಾರಿಗಳು ನೀಡಿರುವ ವೈದ್ಯಕೀಯ ದೃಢಪತ್ರ. (ದೈಹಿಕ ಅರ್ಹತೆ ಪ್ರಮಾಣ ಪತ್ರ)
- ಬಹುಪತ್ನಿತ್ವ / ಬಹುಪತಿತ್ವ ಹೊಂದಿಲ್ಲದಿರುವ ಬಗ್ಗೆ ತಹಸೀಲ್ದಾರರಿಂದ ಪಡೆದ ದೃಢೀಕರಣ ಪತ್ರ.
- ಜನ್ಮ ದಿನಾಂಕದ ದೃಢೀಕರಣ ಪತ್ರ
- ಜಾತಿ ಪ್ರಮಾಣ ಪತ್ರ.

**4.2 ಅರ್ಜಿಗಳನ್ನು ಸಲ್ಲಿಸಬೇಕಾದ ವಿಳಾಸ :**

**ಅರಣ್ಯ ಸಂರಕ್ಷಣಾಧಿಕಾರಿಗಳು,**
**ಚಾಮರಾಜನಗರ ವೃತ್ತ,**
**ಸುಲ್ತಾನ್ ಷರೀಫ್ ವೃತ್ತ, ಸತ್ಯಮಂಗಲ ರಸ್ತೆ,**
**ಚಾಮರಾಜನಗರ – 571 313**

**4.3 ಸ್ವೀಕೃತ ಅರ್ಜಿಗಳ ಪರಾಮರ್ಶೆ / ನೇಮಕಾತಿ ವಿಧಾನ :**

ಅರ್ಜಿ ಸ್ವೀಕರಿಸಿದ ನಂತರ ಅರ್ಹ ಅಭ್ಯರ್ಥಿಗಳನ್ನು ಆಯ್ಕೆ ಸಮಿತಿಯ ಮುಂದೆ ಹಾಜರಾಗಲು ತಿಳಿಸಲಾಗುವುದು. ಅಭ್ಯರ್ಥಿಗಳಿಂದ ಆನೆಯ ಸಾಕಣೆಯ ಸಾಮರ್ಥ್ಯ ಮತ್ತು ಕನ್ನಡ ಭಾಷೆಯನ್ನು ಮಾತನಾಡುವ ಮತ್ತು ತಿಳಿದುಕೊಳ್ಳುವ

ಸಾಮರ್ಥ್ಯಕ್ಕನುಗುಣವಾಗಿ ಆಯ್ಕೆ ಸಮಿತಿಯು (ಗರಿಷ್ಠ 100 ಅಂಕಗಳಿಗೆ) ಅಂಕಗಳನ್ನು ನೀಡಿ ಹಾಗೂ ಮೀಸಲಾತಿ ನಿಯಮಗಳನ್ನನುಸರಿಸಿ ಆಯ್ಕೆ ಪಟ್ಟಿಯನ್ನು ಸಿದ್ಧಗೊಳಿಸಲಾಗುವುದು.

**4.4 ಅಭ್ಯರ್ಥಿಗಳು ಸಂದರ್ಶನಕ್ಕೆ ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗಬೇಕು.**

**5.0 ಆಯ್ಕೆಯಾದ ಅಭ್ಯರ್ಥಿಗಳ ಖಾಯಂಪೂರ್ವ / ಪರೀಕ್ಷಾರ್ಥ ಅವಧಿ ಹಾಗೂ ನಿಯುಕ್ತಿ:**

ಆಯ್ಕೆಯಾದ ಅಭ್ಯರ್ಥಿಗಳು 24 ತಿಂಗಳುಗಳು ಖಾಯಂಪೂರ್ವ/ಪರೀಕ್ಷಾರ್ಥ ಅವಧಿಯನ್ನು ತೃಪ್ತಿಕರವಾಗಿ ಪೂರೈಸತಕ್ಕದ್ದು.

ಆಯ್ಕೆಯಾದ ಅಭ್ಯರ್ಥಿಯು ಪ್ರಪ್ರಥಮವಾಗಿ ಅವರನ್ನು ನೇಮಕ ಮಾಡುವ ಸ್ಥಳದಲ್ಲಿ ಕನಿಷ್ಠ 5 ವರ್ಷಗಳ ಸೇವೆಯನ್ನು ಪೂರೈಸತಕ್ಕದ್ದು.

**6.0 ಮೂಲ ದಾಖಲಾತಿಗಳ ಪರಿಶೀಲನೆ :**

**6.1** ಮೀಸಲಾತಿ ವರ್ಗೀಕರಣ ಹಾಗೂ ಇತರೆ ಮೂಲ ಪ್ರಮಾಣ ಪತ್ರಗಳನ್ನು ಸಂದರ್ಶನಕ್ಕೆ ಹಾಜರಾಗುವಾಗ ಸಂಬಂಧಿಸಿದ ಆಯ್ಕೆ ಸಮಿತಿಯ ಎದುರು ಹಾಜರುಪಡಿಸಬೇಕು.

ಅರ್ಹ ಅಭ್ಯರ್ಥಿಗಳು ಮೂಲ ದಾಖಲಾತಿಗಳ ಪರಿಶೀಲನಾ ಸಂದರ್ಭದಲ್ಲಿ ಅರ್ಜಿಯಲ್ಲಿ ನಮೂದಿಸಿರುವ ಎಲ್ಲಾ ಮಾಹಿತಿಗಳಿಗೆ ಪೂರಕವಾಗಿ ವಯಸ್ಸು, (ಜನ್ಮ ದಿನಾಂಕ ತಿಳಿಯಲು ಪ್ರಮಾಣ ಪತ್ರಗಳನ್ನು) ಮೀಸಲಾತಿ ವರ್ಗೀಕರಣ, ಇತ್ಯಾದಿ ದಾಖಲಾತಿ / ಪ್ರಮಾಣ ಪತ್ರಗಳ ಮೂಲ ಪ್ರತಿಗಳನ್ನು ನಿಗದಿಪಡಿಸಲಾಗುವ ದಿನಾಂಕ ಮತ್ತು ಅಧಿಕಾರಿಗಳ ಎದುರು ತಪ್ಪದೇ ಹಾಜರುಪಡಿಸಬೇಕು ಹಾಗೂ ಇಂತಹ ದಾಖಲೆಗಳನ್ನು ಹಾಜರು ಪಡಿಸಲು ಕಾಲ ವಿಸ್ತರಣೆ ನೀಡಲಾಗುವುದಿಲ್ಲ.

**6..2** ವಿವಿಧ ಪ್ರವರ್ಗಗಳ ಅಡಿಯಲ್ಲಿ ಮೀಸಲಾತಿ ಕೋರಿದ ಅಭ್ಯರ್ಥಿಗಳು, ಮೂಲ ದಾಖಲೆಗಳ ಪರಿಶೀಲನೆಯ ಸಮಯದಲ್ಲಿ ಹಾಜರುಪಡಿಸಬೇಕಾದ ಪ್ರಮಾಣ ಪತ್ರಗಳನ್ನು ಹಾಜರುಪಡಿಸದೇ ಇದ್ದ ಪಕ್ಷದಲ್ಲಿ ಅವರು ಕೋರಿರುವ ಮೀಸಲಾತಿಯನ್ನು ರದ್ದುಪಡಿಸಿ, ಸಾಮಾನ್ಯ ಅರ್ಹತೆಯ ಅಭ್ಯರ್ಥಿಯೆಂದು ಅವರನ್ನು ಪರಿಗಣಿಸಲಾಗುವುದು.

**6.3 ವಿವಿಧ ಪ್ರವರ್ಗಗಳ ಅಡಿ ಮೀಸಲಾತಿ ಕೋರಿದ ಅಭ್ಯರ್ಥಿಗಳು ಸಲ್ಲಿಸಬೇಕಾದ ಪ್ರಮಾಣ ಪತ್ರಗಳ ವಿವರ:**

ವಿವಿಧ ಪ್ರವರ್ಗಗಳ ಅಡಿ ಮೀಸಲಾತಿ ಕೋರಿ ಅರ್ಜಿ ಸಲ್ಲಿಸುವವರು ಜಾತಿ ಪ್ರಮಾಣ ಪತ್ರವನ್ನು ಈ ಕೆಳಕಂಡ ನಮೂನೆಗಳಲ್ಲಿ ಹೊಂದಿರಬೇಕು.

**6.3.1** ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಅಭ್ಯರ್ಥಿಗಳು ಸಂಬಂಧಪಟ್ಟ ತಹಶೀಲ್ದಾರ್‌ರವರಿಂದ ನೀಡಲಾದ ಜಾತಿ ಪ್ರಮಾಣ ಪತ್ರ **"ನಮೂನೆ–ಡಿ"** ರಲ್ಲಿ.

**6.3.2** ಪ್ರವರ್ಗ–I ರ ಅಭ್ಯರ್ಥಿಗಳು ಸಂಬಂಧಪಟ್ಟ ತಹಶೀಲ್ದಾರ್‌ರವರಿಂದ ನೀಡಲಾದ ಜಾತಿ ಪ್ರಮಾಣ ಪತ್ರ **"ನಮೂನೆ–ಇ"** ರಲ್ಲಿ.

**6.3.3** ಪ್ರವರ್ಗ–II(ಎ), II(ಬಿ), III(ಎ) ಮತ್ತು III(ಬಿ) ಅಭ್ಯರ್ಥಿಗಳು ಸಂಬಂಧಪಟ್ಟ ತಹಶೀಲ್ದಾರ್ ರವರಿಂದ ನೀಡಲಾದ ಜಾತಿ ಪ್ರಮಾಣ ಪತ್ರ **"ನಮೂನೆ–ಎಫ್"** ರಲ್ಲಿ.

**ಸೂಚನೆ:** **"ನಮೂನೆ–ಎಫ್"** ಪ್ರಮಾಣ ಪತ್ರವು ಅಧಿಸೂಚನೆಯ ದಿನಾಂಕಕ್ಕೆ ಒಂದು ವರ್ಷಕ್ಕಿಂತ ಹೆಚ್ಚು ಹಳೆಯ ಸಮಯದ್ದಾಗಿರಬಾರದು ಎಂಬುದನ್ನು ಅಭ್ಯರ್ಥಿಯು ಗಮನದಲ್ಲಿಡತಕ್ಕದ್ದು. ಅವಧಿ ಮೀರಿದ ಪ್ರಮಾಣ ಪತ್ರವನ್ನು ಪರಿಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ.

**6.3.4** ಯೋಜನಾ ನಿರಾಶ್ರಿತ ಮೀಸಲಾತಿ ವರ್ಗೀಕರಣದಲ್ಲಿ ಮೀಸಲಾತಿ ಕೋರಿರುವ ಅಭ್ಯರ್ಥಿಗಳು ಸಂಬಂಧಪಟ್ಟ ತಹಶೀಲ್ದಾರ್‌ರಿಂದ ನಮೂನೆ–3 ರಲ್ಲಿ ನೀಡಿರುವ ಪ್ರಮಾಣ ಪತ್ರವನ್ನು ಹಾಜರು ಪಡಿಸಬೇಕು.

**7.0 ಗಮನಿಸಬೇಕಾದ ಅಂಶಗಳು :**

**7.1** ಅಂಚೆ ಮೂಲಕ ಅಥವಾ ಇನ್ನಿತರೆ ಯಾವುದೇ ವ್ಯವಸ್ಥೆ ಮೂಲಕ ಕೊನೆಯ ದಿನಾಂಕದ ನಂತರ ಬಂದ ಅರ್ಜಿಗಳನ್ನು ಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ ಹಾಗೂ ಅರ್ಜಿಗಳು ಮೇಲೆ ತಿಳಿಸಿರುವ ವಿಳಾಸಕ್ಕೆ ತಲುಪಲು ವಿಳಂಬವಾದರೆ ಇಲಾಖೆಯು ಜವಾಬ್ದಾರಿಯಲ್ಲ.

**7.2** ನಿಗದಿತ ನಮೂನೆಯಲ್ಲಿಲ್ಲದ ಅಥವಾ ಅಪೂರ್ಣ ಮಾಹಿತಿ ನೀಡಿದ ಅರ್ಜಿಗಳನ್ನು ಅನರ್ಹ ಅರ್ಜಿಗಳೆಂದು ಪರಿಗಣಿಸಿ ತಿರಸ್ಕರಿಸಲಾಗುವುದು. ಅಭ್ಯರ್ಥಿಯು ಅರ್ಜಿಯನ್ನು ಸಮರ್ಪಕವಾಗಿ ತುಂಬದೇ ಸದರಿ ಅರ್ಜಿಯು ತಿರಸ್ಕೃತವಾದ ಪಕ್ಷದಲ್ಲಿ ಅಥವಾ ಯಾವುದೇ ಸೌಲಭ್ಯದಿಂದ ವಂಚಿತರಾದ ಪಕ್ಷದಲ್ಲಿ ತತ್ಸಂಬಂಧ ಯಾವುದೇ ಪತ್ರ ವ್ಯವಹಾರಕ್ಕೆ ಅವಕಾಶವಿರುವುದಿಲ್ಲ.

**7.3** ಯಾವುದೇ ಅಭ್ಯರ್ಥಿಯು ಅರ್ಜಿ ಹಾಕುವ ಸಮಯದಲ್ಲಿ ರಾಜ್ಯ ಅಥವಾ ಕೇಂದ್ರ ಸರ್ಕಾರಿ ಇಲಾಖೆಯಲ್ಲಿ ಅಥವಾ ಸಂಸ್ಥೆಗಳಲ್ಲಿ ಅಥವಾ ಪ್ರಾಧಿಕಾರದಲ್ಲಿ ಖಾಯಂ ಅಥವಾ ತಾತ್ಕಾಲಿಕ ನೌಕರಿಯಲ್ಲಿದ್ದಲ್ಲಿ ಅರ್ಜಿಯನ್ನು ಸಂಬಂಧಿಸಿದ ಇಲಾಖೆ/ಸಂಸ್ಥೆ/ಪ್ರಾಧಿಕಾರದ ಮುಖಾಂತರ ಸಲ್ಲಿಸಬೇಕು.

**7.4** ಯಾವುದೇ ಅಭ್ಯರ್ಥಿಯು ತನ್ನ ಆಯ್ಕೆಗೆ ಸಂಬಂಧಿಸಿದಂತೆ ಬಾಹ್ಯ ಒತ್ತಡ ತರಲು ಪ್ರಯತ್ನಿಸಿದ್ದಲ್ಲಿ ಅಂತಹ ಅಭ್ಯರ್ಥಿಯನ್ನು ಅನರ್ಹಗೊಳಿಸಲಾಗುವುದು.

**7.5** ಅಭ್ಯರ್ಥಿಯು ಒಂದೇ ಹುದ್ದೆಗೆ ಒಂದಕ್ಕಿಂತ ಹೆಚ್ಚಿನ ಅರ್ಜಿ ಭರ್ತಿ ಮಾಡಿ ಬೇರೆ ಬೇರೆ ಅರ್ಜಿಗಳಲ್ಲಿ ವಿಭಿನ್ನವಾದ ವಿವರಗಳನ್ನು ನಮೂದಿಸಿದ್ದಲ್ಲಿ ಅಂತಹ ಅಭ್ಯರ್ಥಿಯ ಎಲ್ಲಾ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

**7.6** ಕರ್ನಾಟಕ ರಾಜ್ಯದ ಯಾವುದೇ ಸರ್ಕಾರಿ ಇಲಾಖೆ, ಕೇಂದ್ರ ಸರ್ಕಾರಿ ಇಲಾಖೆ ಅಥವಾ ಅರೆ ಸರ್ಕಾರಿ ಸ್ವಾಮ್ಯದ ಸಂಸ್ಥೆಯ ಸೇವೆಯಿಂದ ವಜಾಗೊಂಡಿರುವ ನೌಕರರು ನೇಮಕಾತಿಗೆ ಅರ್ಹರಲ್ಲ.

**7.7** ಕಾನೂನು ಬಾಹಿರನೆಂದು ಸಂಸ್ಥೆ ಅಥವಾ ಸಂಘ ಘೋಷಿಸಲಾದ ಸದಸ್ಯರಾಗಿದ್ದರೆ ಅಥವಾ ಇನ್ನಾವುದೇ ರೀತಿಯಲ್ಲಿ ಅಂತಹ ಸಂಘ ಸಂಸ್ಥೆಗಳೊಂದಿಗೆ ನಿಕಟ ಸಂಪರ್ಕ ಹೊಂದಿದ್ದರೆ ಅಂತಹ ವ್ಯಕ್ತಿ ನೇಮಕಾತಿಗೆ ಅರ್ಹರಾಗುವುದಿಲ್ಲ.

**7.8** ಅಭ್ಯರ್ಥಿಯು ಸಮಾಜ ಘಾತುಕ ಕೃತ್ಯಗಳಲ್ಲಿ ತೊಡಗಿ ಅಪರಾಧಿಯಾಗಿದ್ದರೆ, ಅಂತಹ ವ್ಯಕ್ತಿಗಳು ನೇಮಕಾತಿಗೆ ಅರ್ಹರಾಗುವುದಿಲ್ಲ.

**7.9** ಒಬ್ಬರಿಗಿಂತ ಹೆಚ್ಚು ಜೀವಂತ ಪತ್ನಿ/ಪತಿಯರನ್ನು ಹೊಂದಿದ ಪುರುಷ/ಮಹಿಳೆ ಅಭ್ಯರ್ಥಿಗಳು ಸರ್ಕಾರದ ಪೂರ್ವಾನುಮತಿ ಇಲ್ಲದೆ ನೇಮಕಾತಿಗೆ ಅರ್ಹರಾಗಿರುವುದಿಲ್ಲ.

**7.10** ಅಭ್ಯರ್ಥಿಯು ನೇಮಕಾತಿ ಸಂದರ್ಶನಕ್ಕೆ ಬೇರೊಬ್ಬ ವ್ಯಕ್ತಿಯನ್ನು ತಮ್ಮ ಪರವಾಗಿ ಕಳುಹಿಸಿದ್ದಲ್ಲಿ ಅಥವಾ ತಪ್ಪು ಮಾಹಿತಿಗಳನ್ನು ನಮೂದಿಸಿದ್ದಲ್ಲಿ ಅಥವಾ ಕೃತ್ರಿಮ ಅಥವಾ ತಿದ್ದಿದ ದಾಖಲಾತಿಗಳನ್ನು ಅಥವಾ ಅಸತ್ಯ ವಿವರಗಳನ್ನು ನೀಡಿದಲ್ಲಿ ಅಥವಾ ಸತ್ಯ ವಿಷಯಗಳನ್ನು ಮರೆ ಮಾಚಿದ ಅಥವಾ ಅನುಚಿತ ಮಾರ್ಗಗಳನ್ನು ಉಪಯೋಗಿಸಿದಲ್ಲಿ ಅಥವಾ ಪ್ರಯತ್ನಿಸಿದಲ್ಲಿ ಅನರ್ಹರೆಂದು ಪರಿಗಣಿಸಲಾಗುವುದು ಮತ್ತು ಕರ್ನಾಟಕ ನಾಗರೀಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು 1977 ರ ಉಪ ನಿಯಮ 20 ರಂತೆ ಅಪರಾಧಿ ವ್ಯವಹರಣೆಗೆ ಒಳಪಡುವರು.

**7.11** ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ–ಎಸ್‌ಪಿಎಸ್–04–ಪಿಇಟಿ–2005 ದಿನಾಂಕ 31–03–2006 ರಂತೆ ಅಂಶದಾಯಿ ನಿವೃತ್ತಿ ಯೋಜನೆ (Contributory pension scheme) ಗೆ ಆಯ್ಕೆಯಾದ ಅಭ್ಯರ್ಥಿಗಳು ಬದ್ಧರಾಗಿರುತ್ತಾರೆ.

**7.12** ಅಭ್ಯರ್ಥಿಗಳು ತಮ್ಮ ಮಾಹಿತಿಗಾಗಿ ಭರ್ತಿ ಮಾಡಿ ಸಲ್ಲಿಸಿದ ಅರ್ಜಿಯ ಒಂದು ಜೆರಾಕ್ಸ್ ಪ್ರತಿಯನ್ನು ತಮ್ಮೊಂದಿಗೆ ತಪ್ಪದೆ ಇಟ್ಟುಕೊಳ್ಳಲು ಸೂಚಿಸಿದೆ.

**7.13** ಪ್ರಕಟಿಸಲಾಗಿರುವ ಹುದ್ದೆಗಳ ಸಂಖ್ಯೆಯಲ್ಲಿ ಕಡಿತ ಅಥವಾ ಹೆಚ್ಚುವರಿ ಆದಲ್ಲಿ ಅದನ್ನು ಇಲಾಖಾ ವೆಬ್‌ಸೈಟ್ (www.karanatakaforest.gov.in) ನಲ್ಲಿ ಪ್ರಕಟಿಸಲಾಗುವುದು.

**7.14** ಯಾವುದೇ ತಿಳುವಳಿಕೆ ದೊರೆಯದ ಅಭ್ಯರ್ಥಿಗಳು ನೇಮಕಾತಿಗೆ ಆಯ್ಕೆಯಾಗಿರುವುದಿಲ್ಲವೆಂದು ತಿಳಿಯುವುದು.

**7.15** ಆಯ್ಕೆಗೊಂಡು ನೇಮಕಾತಿ ಹೊಂದುವ ಅಭ್ಯರ್ಥಿಗಳು ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಎಲ್ಲಾ ಸೇವಾ ನಿಯಮಗಳಿಗೆ ಒಳಪಡುತ್ತಾರೆ.

ಪಿ.ಆರ್. 380 ಅರಣ್ಯ ಸಂರಕ್ಷಣಾಧಿಕಾರಿ, ಚಾಮರಾಜನಗರ ವೃತ್ತ, ಚಾಮರಾಜನಗರ.

**ತೋಟಗಾರಿಕೆ ಇಲಾಖೆ**

**ತೋಟಗಾರಿಕೆ ನಿರ್ದೇಶನಾಲಯ, ಲಾಲ್‌ಬಾಗ್, ಬೆಂಗಳೂರು**

**ಅಲ್ಪಾವಧಿ ಟೆಂಡರ್ ಪ್ರಕಟಣೆ**

**ಸಂಖ್ಯೆ:ಸತೋನಿ:ಪುವಿ:ಸತೋಅ:16:2008–09, ದಿನಾಂಕ: 21ನೇ ಮೇ 2009.**

**ವಿಷಯ:** 2009–10ನೇ ಸಾಲಿನ ನಗರೂರು ಮಾದರಿ ಪುಷ್ಪಾಭಿವೃದ್ಧಿ ಕೇಂದ್ರ ಹಾಗೂ ಪುಷ್ಪಾಭಿವೃದ್ಧಿ ವಿಭಾಗ, ಲಾಲ್‌ಬಾಗ್‌ನಲ್ಲಿ ತೋಟಗಾರಿಕೆ ಕೆಲಸಗಳನ್ನು ಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸುವ ಬಗ್ಗೆ.

2009–10ನೇ ಸಾಲಿನ **ನಗರೂರು ಮಾದರಿ ಪುಷ್ಪಾಭಿವೃದ್ಧಿ ಕೇಂದ್ರ ಹಾಗೂ ಪುಷ್ಪಾಭಿವೃದ್ಧಿ ವಿಭಾಗ, ಲಾಲ್‌ಬಾಗ್‌ನಲ್ಲಿ** ತೋಟಗಾರಿಕೆ ಕೆಲಸಗಳಾದ ನೀರು ಹಾಕುವುದು, ಅಗೆತ ಮಾಡುವುದು, ಕಳೆ ತೆಗೆಯುವುದು, ಸಸಿಮಡಿ ಮಾಡುವುದು, ಪಾತಿ ಮಾಡುವುದು, ಟ್ರೆಂಚ್ ಮಾಡುವುದು, ಸಸಿ ನೆಡುವುದು, ಗಡ್ಡೆ ನೆಡುವುದು, ಗೊಬ್ಬರ ಹಾಕುವುದು, ಸಸ್ಯ ಸಂರಕ್ಷಣೆ ಔಷಧಿ ಸಿಂಪರಣೆ ಮಾಡುವುದು, ಪಾಟಿಂಗ್, ಸಸ್ಯಾಭಿವೃದ್ಧಿ, ಪಾಲಿಥೀನ್ ಬ್ಯಾಗ್‌ಗೆ ಗೊಬ್ಬರ ಹಾಕುವ ಕೆಲಸ ಇತ್ಯಾದಿಗಳನ್ನು ಗುತ್ತಿಗೆ ಆಧಾರದ ಮೇಲೆ ಮಾಡಿಸಲು ಉದ್ದೇಶಿಸಲಾಗಿದ್ದು, ಇಚ್ಛಿಸುವ ಸಂಸ್ಥೆ ಅಥವಾ ವ್ಯಕ್ತಿಗಳಿಂದ **ಅಲ್ಪಾವಧಿ ಟೆಂಡರ್** ಅನ್ನು ಆಹ್ವಾನಿಸಲಾಗಿದೆ. ಟೆಂಡರ್‌ನ **ಅಂದಾಜು ಮೌಲ್ಯ ರೂ.3.00 ಲಕ್ಷಗಳು**. ಆಸಕ್ತಿಯುಳ್ಳ ಸಂಸ್ಥೆ / ವ್ಯಕ್ತಿಗಳು ತಮ್ಮ ಅತಿ ಕಡಿಮೆ ದರವನ್ನು ನಮೂದಿಸಿ ಮೊಹರಾದ ಟೆಂಡರ್‌ಅನ್ನು ಸಹಾಯಕ ತೋಟಗಾರಿಕೆ ನಿರ್ದೇಶಕರು, (ಪುಷ್ಪಾಭಿವೃದ್ಧಿ ವಿಭಾಗ) ಲಾಲ್‌ಬಾಗ್, ಬೆಂಗಳೂರುರವರಿಗೆ ಕಳುಹಿಸತಕ್ಕದ್ದು. ಮೊಹರಾದ ಲಕೋಟೆಯ ಮೇಲೆ "**ತೋಟಗಾರಿಕೆ ಕೆಲಸಗಳನ್ನು ಗುತ್ತಿಗೆ ಮೇಲೆ ಮಾಡಲು ಟೆಂಡರ್**" ಎಂದು ನಮೂದಿಸತಕ್ಕದ್ದು.

## ಲೋಕೋಪಯೋಗಿ ಇಲಾಖೆ

## ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ ಚಿಕ್ಕಬಳ್ಳಾಪುರ ವಿಭಾಗ, ಚಿಕ್ಕಬಳ್ಳಾಪುರ

**1) ಅಲ್ಪಾವಧಿ ಟೆಂಡರ್‌ಗಳಿಗಾಗಿ ಆಹ್ವಾನ (I.F.T) ಸಂಖ್ಯೆ: 20–2/2008–09 ದಿನಾಂಕ: 25ನೇ ಮೇ 2009**

**2) ಅಲ್ಪಾವಧಿ ಟೆಂಡರ್‌ಗಳಿಗಾಗಿ ಆಹ್ವಾನ (I.F.T) ಸಂಖ್ಯೆ: 20–1/2008–09 ದಿನಾಂಕ: 25ನೇ ಫೆಬ್ರವರಿ 2009**

**3) ಅಲ್ಪಾವಧಿ ಟೆಂಡರ್‌ಗಳಿಗಾಗಿ ಆಹ್ವಾನ (I.F.T) ಸಂಖ್ಯೆ: 20/2008–09 ದಿನಾಂಕ: 16ನೇ ಫೆಬ್ರವರಿ 2009**

**ಟೆಂಡರ್ ತಿದ್ದುಪಡಿ ಮತ್ತು ಮುಂದೂಡಿಕೆ**

**ಸೆಕ್ಷನ್ – 1 – ಟೆಂಡರುಗಳಿಗಾಗಿ ಅರ್ಜಿ ಆಹ್ವಾನ (IFT)**

**(ರಸ್ತೆ, ಸೇತುವೆ ಹಾಗೂ ಕಟ್ಟಡಗಳ ಕಾಮಗಾರಿಗಳಿಗಾಗಿ – ಸ್ಟಾಂಡರ್ಡ್ ಬಿಡ್ಡಿಂಗ್ ಡಾಕ್ಯುಮೆಂಟ್ ಕೆ/ಡಬ್ಲ್ಯೂ–3 ಮತ್ತು 4 ರಂತೆ ದ್ವಿ–ಲಕೋಟೆ ಪದ್ಧತಿಯಲ್ಲಿ ಟೆಂಡರ್ ಆಹ್ವಾನ)**

1. ಈ ಕೆಳಗೆ ತಿಳಿಸಿದ ಕಾಮಗಾರಿಗಳಿಗಾಗಿ ಲೋಕೋಪಯೋಗಿ ಇಲಾಖೆಯಲ್ಲಿ ನೊಂದಾಯಿತ ಅರ್ಹ ಗುತ್ತಿಗೆದಾರರಿಂದ ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಚಿಕ್ಕಬಳ್ಳಾಪುರ ವಿಭಾಗ, ಚಿಕ್ಕಬಳ್ಳಾಪುರ – 562 101 ರವರು ಮ್ಯಾನ್ಯುಯಲ್ ಮೂಲಕ ರಾಜ್ಯಪಾಲರು, ಕರ್ನಾಟಕ ಸರ್ಕಾರ ರವರ ಪರವಾಗಿ ಐಟಮ್–ರೇಟ್ ಟೆಂಡರ್‌ಗಳನ್ನು ಅಧಿಸೂಚನೆ ಸಂಖ್ಯೆ:20/2008–09 ದಿನಾಂಕ: 16.02.2009 ರಂದು ಆಹ್ವಾನಿಸಲಾಗಿದ್ದು, ಅಂದಾಜು ಪಟ್ಟಿಗಳು ನಿಗದಿತ ಅವಧಿಯೊಳಗೆ ಅನುಮೋದನೆ ಆಗದೇ ಇದ್ದುದರಿಂದ ಅಧಿಸೂಚನೆ ಸಂಖ್ಯೆ: 20–1/2008–09 ದಿನಾಂಕ: 25.02.2009ರಲ್ಲಿ ಅನಿರ್ದಿಷ್ಟ ಕಾಲಾವಧಿವರೆಗೆ ಮುಂದೂಡಲಾಗಿತ್ತು. ಈಗ ಕಾಮಗಾರಿ ಅಂದಾಜುಗಳಿಗೆ ಮಂಜೂರಾತಿ ದೊರೆತಿರುವುದರಿಂದ ಅರ್ಹ ಗುತ್ತಿಗೆದಾರರು ಕೆಳಗಿನ ಕೋಷ್ಟಕದಲ್ಲಿ ನಮೂದಿಸಿರುವ ಎಲ್ಲಾ ಕಾಮಗಾರಿಗಳಿಗೆ ಟೆಂಡರ್‌ಗಳನ್ನು ಮಾನವ ಆಧಾರಿತ ಬದಲಾಗಿ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಮೂಲಕ ಅಧಿಸೂಚನೆಯಲ್ಲಿ ಸೂಚಿಸಿರುವ ದಿನಾಂಕದೊಳಗೆ (ದ್ವಿಲಕೋಟೆಗಳಲ್ಲಿ) ತಾಂತ್ರಿಕ ಬಿಡ್ ಮತ್ತು ಆರ್ಥಿಕ ಬಿಡ್‌ಗಳನ್ನು ಟೆಂಡರ್ ದಸ್ತಾವೇಜಿನಲ್ಲಿರುವಂತೆ ಸಲ್ಲಿಸಬಹುದಾಗಿರುತ್ತದೆ. ಕಾಮಗಾರಿಗೆ ಬೇಕಾಗುವ ಕನಿಷ್ಟತಮ ಪೂರ್ವಾರ್ಹತೆಯ ಬಗ್ಗೆ ಟೆಂಡರ್ ದಾಸ್ತಾವೇಜಿನ ಭಾಗ–3ರ ಗುತ್ತಿಗೆದಾರರಿಗೆ ನೀಡಿರುವ ಸೂಚನೆಗಳನ್ನು ನೋಡಲು ಕೋರಲಾಗಿದೆ.
2. ಟೆಂಡರ್ ಡಾಕ್ಯೂಮೆಂಟ್‌ಗಳನ್ನು ಕರ್ನಾಟಕ ಸರ್ಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಅಂದರೆ https://eproc.karnataka.gov.in ಮೂಲಕ ದಿನಾಂಕ:10.06.2009 ರಿಂದ 16.06.2009 ರವರಿಗೆ ಪಡೆಯಬಹುದಾಗಿರುತ್ತದೆ.
3. ಟೆಂಡರ್‌ನೊಂದಿಗೆ ಈ ಕೆಳಗಿನ ಕೋಷ್ಟಕದಲ್ಲಿ ನಮೂದಿಸಿರುವ ಇ.ಎಂ.ಡಿ. ಹಣವನ್ನು ಟೆಂಡರ್ ಅರ್ಹತಾ ಅವಧಿಯನ್ನು ಬಿಟ್ಟು ಹೆಚ್ಚಿನ 45 ದಿನಗಳ ಅವಧಿಯನ್ನು ಒಳಗೊಂಡಿರುವಂತೆ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್‌ನಲ್ಲಿ ತಿಳಿಸಿರುವ ರೂಪದಲ್ಲಿ ಪಾವತಿಸುವುದು.
4. ಟೆಂಡರ್‌ಗಳನ್ನು ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಆನ್‌ಲೈನ್ ಮೂಲಕ ದಿನಾಂಕ: 20.06.09 ರಂದು ಸಂಜೆ 4.00 ಗಂಟೆ ಒಳಗಾಗಿ ಸಲ್ಲಿಸತಕ್ಕದ್ದು ಮತ್ತು ಸದರಿ ಟೆಂಡರ್‌ಗಳನ್ನು ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಗೈಡ್‌ಲೈನ್‌ನಂತೆ / ಟೆಂಡರ್ ಅಧಿಸೂಚನೆಯಲ್ಲಿ ಸೂಚಿಸಿರುವಂತೆ ನಿಗದಿತ ಸಮಯದಲ್ಲಿ ತೆರೆಯಲಾಗುವುದು.
5. ಟೆಂಡರ್ ಪೂರ್ವ ಸಭೆಯನ್ನು ಕಾಮಗಾರಿ ಕ್ರಮ ಸಂಖ್ಯೆ–5ಕ್ಕೆ ದಿನಾಂಕ: 12.06.2009 ರಂದು ಮಧ್ಯಾಹ್ನ 3.00 ಗಂಟೆಗೆ ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಚಿಕ್ಕಬಳ್ಳಾಪುರ ವಿಭಾಗ, ಚಿಕ್ಕಬಳ್ಳಾಪುರ ರವರ ಕಛೇರಿಯಲ್ಲಿ ನಡೆಸಲಾಗುವುದು.
6. ಹೆಚ್ಚಿನ ಮಾಹಿತಿಗಾಗಿ www.kpwd.gov.in ವೆಬ್‌ಸೈಟ್‌ನ್ನು ಸಂಪರ್ಕಿಸಬಹುದು ಅಥವಾ ಕಛೇರಿಯ ಕೆಲಸದ ವೇಳೆಯಲ್ಲಿ ಸಂಪರ್ಕಿಸಬಹುದು.

**ಕೋಷ್ಟಕ**

| ಕ್ರ. ಸಂ. | ಕೆಲಸದ ಹೆಸರು | ಟೆಂಡರ್‌ಗಿಟ್ಟ ಮೊತ್ತ ರೂ.ಲಕ್ಷಗಳಲ್ಲಿ | ಇ.ಎಂ.ಡಿ. (ರೂ. ಲಕ್ಷಗಳಲ್ಲಿ) | ಟೆಂಡರ್ ಪ್ರೊಸೆಸಿಂಗ್ ಶುಲ್ಕ (ರೂ.ಗಳಲ್ಲಿ) | ಗುತ್ತಿಗೆದಾರರ ವರ್ಗ | ಕಾಮಗಾರಿಯನ್ನು ಪೂರ್ಣಗೊಳಿಸಲು ಗೊತ್ತುಪಡಿಸಲಾದ ಕಾಲಾವಧಿ ಮಳೆಗಾಲ ಸೇರಿ ಒಟ್ಟು |
|---|---|---|---|---|---|---|
| 1. | ಬಾಗಪಲ್ಲಿ ತಾ. ವೈ.ಸಿ. ರಸ್ತೆಯಿಂದ ಪಿ.ಬಿ.ಆರ್.ಸಿ.ಪಿ. ರಸ್ತೆ ಮಾರ್ಗ ಮೂಗಿರೆಡ್ಡಿಪಲ್ಲಿ, ಕೊತ್ತಕೋಟವಾಡ್ಲಪಲ್ಲಿ, ನಲ್ಲಸಾನಪಲ್ಲಿ (1ನೇ ಹಂತ) ರಸ್ತೆ ಅಭಿವೃದ್ಧಿ ಕಾಮಗಾರಿ | 75.00 | 1.50 | 2500.00 | 1ನೇ ದರ್ಜೆ | 6 ತಿಂಗಳು |
| 2. | ಚಿಕ್ಕಬಳ್ಳಾಪುರ ತಾ. ಎ.ಡಿ ರಸ್ತೆಯಿಂದ ಎಸ್.ಡಿ. ರಸ್ತೆ ಮಾರ್ಗ ನಲ್ಲಮರದಹಳ್ಳಿ, ಹಿರಿಯಣ್ಣನಹಳ್ಳಿ, ಬಡನಿಂಗನಹಳ್ಳಿ, ಶೆಟ್ಟಿಹಳ್ಳಿ, ಮಲ್ಲಹಳ್ಳಿ ರಸ್ತೆ ಅಭಿವೃದ್ಧಿ ಕಾಮಗಾರಿ | 86.00 | 1.72 | 2500.00 | 1ನೇ ದರ್ಜೆ | 6 ತಿಂಗಳು |
| 3. | ಚಿಂತಾಮಣಿ ತಾ. ಎಸ್.ಬಿ.ಎ. ರಸ್ತೆಯಿಂದ ಚಿಂತಾಮಣಿ–ಚೇಳೂರು ರಸ್ತೆಗೆ ಸೇರುವ ರಸ್ತೆಯ ಮಾರ್ಗ ಯಸಗಳಹಳ್ಳಿ, ಮರಬಹಳ್ಳಿ (1ನೇ ಹಂತ) ರಸ್ತೆ ಅಭಿವೃದ್ಧಿ ಕಾಮಗಾರಿ | 80.00 | 1.60 | 2500.00 | 1ನೇ ದರ್ಜೆ | 6 ತಿಂಗಳು |
| 4. | ಚಿಂತಾಮಣಿ ತಾ. ಅಟ್ಟೂರು–ಹೊಸಹಳ್ಳಿ ರಸ್ತೆಯಿಂದ ಬಿ.ಸಿ. ರಸ್ತೆಗೆ ಮಾರ್ಗ ವಿರೂಪಾಕ್ಷಪುರ, ಅಕ್ಕಿಮಂಗಲ ಹೆಣ್ಣೂರು, ಬಿರ್ಜೇನಹಳ್ಳಿ (1ನೇ ಹಂತ) ರಸ್ತೆ ಅಭಿವೃದ್ಧಿ ಕಾಮಗಾರಿ | 100.00 | 2.00 | 2500.00 | 1ನೇ ದರ್ಜೆ | 6 ತಿಂಗಳು |
| 5. | ಗೌರಿಬಿದನೂರು ತಾ. ಗುಂಡಾಪುರದಿಂದ ಕೋಟಾಲದಿನ್ನೆ–ಅಲಿಪುರ ರಸ್ತೆಗೆ ಸೇರುವ ರಸ್ತೆಯ ಮಾರ್ಗ ಚಿನ್ನನಹಳ್ಳಿ, ಕೆ.ಟಿ.ಹಳ್ಳಿ, ಉಪ್ಪಾರಹಳ್ಳಿ (1ನೇ ಹಂತ) ರಸ್ತೆ ಅಭಿವೃದ್ಧಿ ಕಾಮಗಾರಿ | 105.00 | 1.60 | 2500.00 | 1ನೇ ದರ್ಜೆ | 6 ತಿಂಗಳು |
| 6. | ಶಿಡ್ಲಘಟ್ಟ ತಾ. ಗೊಲ್ಲಹಳ್ಳಿಯಿಂದ ಬಿ.ಬಿ. ರಸ್ತೆಯ ಮಾರ್ಗ ಕುಂದಲಗುರ್ಕಿ, ರೊಪ್ಪಾರ್ಲಹಳ್ಳಿ ಗಂಗಾಪುರ, ಕಾಚಹಳ್ಳಿ (1ನೇ ಹಂತ) ರಸ್ತೆ ಅಭಿವೃದ್ಧಿ ಕಾಮಗಾರಿ. | 79.50 | 1.60 | 2500.00 | 1ನೇ ದರ್ಜೆ | 6 ತಿಂಗಳು |

**ಸೂಚನೆ: ಕಾಮಗಾರಿ ಸಂಖ್ಯೆ 5ರ ಬಗ್ಗೆ ಕೆ.ಡಬ್ಲ್ಯೂ–4 ದಸ್ತಾವೇಜಿನ ಸೂಚನೆಗಳನ್ನು ಪಾಲಿಸುವುದು**

1. ಆಕ್ಷೇಪಣೆ–ಸಂದೇಹ ಮತ್ತು ವಿವರಣೆಗಳಿಗೆ ಕಡೆಯ ದಿನಾಂಕ : 12.06.2009 (ಸಂಜೆ – 3.00 ಗಂಟೆಯವರೆಗೆ ಕಛೇರಿ ವೇಳೆಯಲ್ಲಿ)
2. ಭರ್ತಿಮಾಡಿದ ಟೆಂಡರ್‌ಗಳನ್ನು ಸಲ್ಲಿಸಲು ಕಡೆಯ ದಿನಾಂಕ: 20.06.2009 (ಸಂಜೆ – 4.00 ಗಂಟೆಯವರೆಗೆ)

3. ತಾಂತ್ರಿಕ ಬಿಡ್‌ಗಳನ್ನು ತೆರೆಯುವ ದಿನಾಂಕ: 23.06.2009 ಬೆಳಿಗ್ಗೆ 11.00 ಗಂಟೆಗೆ
4. ಹಣಕಾಸು ಬಿಡ್‌ನ್ನು ತೆರೆಯುವ ದಿನಾಂಕ: 30.06.2009 ಬೆಳಿಗ್ಗೆ 11.00 ಗಂಟೆಗೆ

ಪಿ.ಆರ್. 385 ಕಾರ್ಯನಿರ್ವಾಹಕ ಇಂಜಿನಿಯರ್, ಚಿಕ್ಕಬಳ್ಳಾಪುರ ಲೋ.ಇ. ವಿಭಾಗ, ಚಿಕ್ಕಬಳ್ಳಾಪುರ.

**ಲೋಕೋಪಯೋಗಿ ಇಲಾಖೆ**
**ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ, ಚಿಕ್ಕಬಳ್ಳಾಪುರ ವಿಭಾಗ, ಚಿಕ್ಕಬಳ್ಳಾಪುರ**
**ಅಲ್ಪಾವಧಿ ಟೆಂಡರ್‌ಗಳಿಗಾಗಿ ಆಹ್ವಾನ (I.F.T) ಸಂಖ್ಯೆ: 05/2009–10 ದಿನಾಂಕ: 27ನೇ ಮೇ 2009 (2ನೇ ಕರೆ)**
**(ರಸ್ತೆ, ಸೇತುವೆ ಹಾಗೂ ಕಟ್ಟಡಗಳ ಕಾಮಗಾರಿಗಳಿಗಾಗಿ – ಸ್ಟಾಂಡರ್ಡ್ ಬಿಡ್ಡಿಂಗ್ ಡಾಕ್ಯುಮೆಂಟ್ ಕೆ/ಡಬ್ಲ್ಯೂ–1,2,3 ಮತ್ತು 4 ರಂತೆ ಟೆಂಡರ್ ಆಹ್ವಾನ)**

1. ಈ ಕೆಳಗೆ ತಿಳಿಸಿದ ಕಾಮಗಾರಿಗಳಿಗಾಗಿ ಲೋಕೋಪಯೋಗಿ ಇಲಾಖೆಯಲ್ಲಿ ನೊಂದಾಯಿತ ಅರ್ಹ ಗುತ್ತಿಗೆದಾರರಿಂದ ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಚಿಕ್ಕಬಳ್ಳಾಪುರ ವಿಭಾಗ, ಚಿಕ್ಕಬಳ್ಳಾಪುರ – 562 101 ರವರು ಮ್ಯಾನ್ಯೂಯಲ್ ಮೂಲಕ ರಾಜ್ಯಪಾಲರು, ಕರ್ನಾಟಕ ಸರ್ಕಾರ ರವರ ಪರವಾಗಿ ಐಟಮ್–ರೇಟ್ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಅರ್ಹ ಗುತ್ತಿಗೆದಾರರು ಕೆಳಗಿನ ಕೋಷ್ಟಕದಲ್ಲಿ ನಮೂದಿಸಿರುವ ಎಲ್ಲಾ ಕಾಮಗಾರಿಗಳಿಗೆ ಟೆಂಡರ್‌ಗಳನ್ನು ಮ್ಯಾನ್ಯೂಯಲ್ ಮೂಲಕ ಅಧಿಸೂಚನೆಯಲ್ಲಿ ಸೂಚಿಸಿರುವ ದಿನಾಂಕದೊಳಗೆ (ದ್ವಿಲಕೋಟೆಗಳಲ್ಲಿ) ತಾಂತ್ರಿಕ ಬಿಡ್ ಮತ್ತು ಆರ್ಥಿಕ ಬಿಡ್‌ಗಳನ್ನು ಟೆಂಡರ್ ದಾಸ್ತಾವೇಜಿನಲ್ಲಿರುವಂತೆ ಸಲ್ಲಿಸಬಹುದಾಗಿರುತ್ತದೆ. ಕಾಮಗಾರಿಗೆ ಬೇಕಾಗುವ ಕನಿಷ್ಟತಮ ಪೂರ್ವಾರ್ಹತೆಯ ಬಗ್ಗೆ ಟೆಂಡರ್ ದಾಸ್ತಾವೇಜಿನ ಭಾಗ–3ರ ಗುತ್ತಿಗೆದಾರರಿಗೆ ನೀಡಿರುವ ಸೂಚನೆಗಳನ್ನು ನೋಡಲು ಕೋರಲಾಗಿದೆ.
2. ಟೆಂಡರ್ ಡಾಕ್ಯೂಮೆಂಟ್‌ಗಳನ್ನು ಟೆಂಡರ್ ಆಹ್ವಾನಿಸಿರುವ ಕಛೇರಿಯಿಂದ ದಿನಾಂಕ:12.06.2009 ರಂದು ಪಡೆಯಬಹುದಾಗಿರುತ್ತದೆ.
3. ಟೆಂಡರ್‌ನೊಂದಿಗೆ ಈ ಕೆಳಗಿನ ಕೋಷ್ಟಕದಲ್ಲಿ ನಮೂದಿಸಿರುವ ಇ.ಎಂ.ಡಿ. ಹಣವನ್ನು ಟೆಂಡರ್ ಅರ್ಹತಾ ಅವಧಿಯನ್ನು ಬಿಟ್ಟು ಹೆಚ್ಚಿನ 45 ದಿನಗಳ ಅವಧಿಯನ್ನು ಒಳಗೊಂಡಿರುವಂತೆ ಮ್ಯಾನ್ಯೂಯಲ್‌ನಲ್ಲಿ ತಿಳಿಸಿರುವ ರೂಪದಲ್ಲಿ ಪಾವತಿಸುವುದು.
4. ಭರ್ತಿ ಮಾಡಿದ ಟೆಂಡರ್‌ಗಳನ್ನು ಮ್ಯಾನ್ಯೂಯಲ್ ಮೂಲಕ ದಿನಾಂಕ: 15.06.2009 ರಂದು ಸಂಜೆ 4.00 ಗಂಟೆ ಒಳಗಾಗಿ ಸಲ್ಲಿಸತಕ್ಕದ್ದು ಮತ್ತು ಸದರಿ ಟೆಂಡರ್‌ಗಳನ್ನು ಟೆಂಡರ್ ಅಧಿಸೂಚನೆಯಲ್ಲಿ ಸೂಚಿಸಿರುವಂತೆ ನಿಗದಿತ ಸಮಯದಲ್ಲಿ ತೆರೆಯಲಾಗುವುದು.
5. ಟೆಂಡರ್ ಪೂರ್ವ ಸಭೆಯನ್ನು ದಿನಾಂಕ: 12.06.2009 ರಂದು ಮಧ್ಯಾಹ್ನ 3.00 ಗಂಟೆಗೆ ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಚಿಕ್ಕಬಳ್ಳಾಪುರ ವಿಭಾಗ, ಚಿಕ್ಕಬಳ್ಳಾಪುರ ರವರ ಕಛೇರಿಯಲ್ಲಿ ನಡೆಸಲಾಗುವುದು.
6. ಹೆಚ್ಚಿನ ಮಾಹಿತಿಗಾಗಿ www.kpwd.gov.in ವೆಬ್‌ಸೈಟ್‌ನ್ನು ಸಂಪರ್ಕಿಸಬಹುದು ಅಥವಾ ಕಛೇರಿಯ ಕೆಲಸದ ವೇಳೆಯಲ್ಲಿ ಸಂಪರ್ಕಿಸಬಹುದು.

| ಕ್ರ. ಸಂ. | ಕೆಲಸದ ಹೆಸರು | ಟೆಂಡರ್‌ಗಿಟ್ಟ ಮೊತ್ತ ರೂ.ಲಕ್ಷಗಳಲ್ಲಿ | ಇ.ಎಂ.ಡಿ. (ರೂ. ಲಕ್ಷಗಳಲ್ಲಿ) | ಟೆಂಡರ್ ದಾಖಲೆಗಳ ವೆಚ್ಚ (ಈ ಹಣವನ್ನು ಹಿಂದಿರುಗಿಸುವುದಿಲ್ಲ ಹಾಗೂ ವರ್ಗಾಯಿಸುವುದಿಲ್ಲ) ಎಲ್ಲಾ ತೆರಿಗೆಗಳು ಸೇರಿ (ರೂ.ಗಳಲ್ಲಿ) | ಕಾಮಗಾರಿಯನ್ನು ಪೂರ್ಣಗೊಳಿಸಲು ಗೊತ್ತುಪಡಿಸಲಾದ ಕಾಲಾವಧಿ ಮಳೆಗಾಲ ಸೇರಿ ಒಟ್ಟು |
|---|---|---|---|---|---|
| 1. | ಚಿಂತಾಮಣಿ ಪಟ್ಟಣದಲ್ಲಿ ಸರ್ಕಾರಿ ಮಹಿಳಾ ಪ್ರಥಮ ದರ್ಜೆ ಕಾಲೇಜು ನಿರ್ಮಾಣ (ಕೆ.ಡಬ್ಲ್ಯೂ–4 ರಂತೆ) | 120.00 | 1.80 | 13500.00 | 18 ತಿಂಗಳು |
| 2. | ಗೌರಿಬಿದನೂರು ಪಟ್ಟಣದಲ್ಲಿ ಕಲಾಭವನ ಕಟ್ಟಡ ನಿರ್ಮಾಣ (ಕೆ.ಡಬ್ಲ್ಯೂ–3 ರಂತೆ) | 100.00 | 2.00 | 11300.00 | 18 ತಿಂಗಳು |

| ಕ್ರ. ಸಂ. | ಕೆಲಸದ ಹೆಸರು | ಟೆಂಡರ್‌ಗಿಟ್ಟ ಮೊತ್ತ ರೂ.ಲಕ್ಷಗಳಲ್ಲಿ | ಇ.ಎಂ.ಡಿ. (ರೂ. ಲಕ್ಷಗಳಲ್ಲಿ) | ಟೆಂಡರ್ ದಾಖಲೆಗಳ ವೆಚ್ಚ (ಈ ಹಣವನ್ನು ಹಿಂದಿರುಗಿಸುವುದಿಲ್ಲ ಹಾಗೂ ವರ್ಗಾಯಿಸುವುದಿಲ್ಲ) ಎಲ್ಲಾ ತೆರಿಗೆಗಳು ಸೇರಿ (ರೂ.ಗಳಲ್ಲಿ) | ಕಾಮಗಾರಿಯನ್ನು ಪೂರ್ಣಗೊಳಿಸಲು ಗೊತ್ತುಪಡಿಸಲಾದ ಕಾಲಾವಧಿ ಮಳೆಗಾಲ ಸೇರಿ ಒಟ್ಟು |
|---|---|---|---|---|---|
| 3. | ಗೌರಿಬಿದನೂರು ತಾಲ್ಲೂಕು ರಾಜ್ಯ ಹೆದಾರಿ–94 ರ ಸರಪಳಿ 54.80 ರಿಂದ 57.00 ಕಿಮೀವರೆಗೆ ರಸ್ತೆ ಅಭಿವೃದ್ಧಿ ಕಾಮಗಾರಿ (ಕೆ.ಡಬ್ಲ್ಯೂ–2 ರಂತೆ) | 50.00 | 1.00 | 5700.00 | 4 ತಿಂಗಳು |
| 4. | ಗೌರಿಬಿದನೂರು ತಾಲ್ಲೂಕು ವಿದುರಾಶ್ವತ್ಥ ಶ್ರೀ ಅಶ್ವತ್ಥನಾರಾಯಣಸ್ವಾಮಿ ದೇವಾಲಯದಲ್ಲಿ ಯಾತ್ರಿ ನಿವಾಸ ನಿರ್ಮಾಣ (ಕೆ.ಡಬ್ಲ್ಯೂ–2 ರಂತೆ) | 25.00 | 0.50 | 3000.00 | 6 ತಿಂಗಳು |
| 5. | ಬಾಗೇಪಲ್ಲಿ ತಾಲ್ಲೂಕು, ಎಂ.ಸಿ. ರಸ್ತೆಯ ಆಯ್ದಭಾಗಗಳಲ್ಲಿ ರಸ್ತೆ ಮತ್ತು ಮೋರಿ ಅಭಿವೃದ್ಧಿಪಡಿಸುವ ಕಾಮಗಾರಿ. (ಕೆ.ಡಬ್ಲ್ಯೂ–2 ರಂತೆ) | 25.00 | 0.50 | 3000.00 | 3 ತಿಂಗಳು |
| 6. | ಬಾಗೇಪಲ್ಲಿ ತಾಲ್ಲೂಕು, ವೈ.ಸಿ. ರಸ್ತೆ ಆಯ್ದಭಾಗಗಳಲ್ಲಿ ರಸ್ತೆ ಅಭಿವೃದ್ಧಿಪಡಿಸುವ ಕಾಮಗಾರಿ. (ಕೆ.ಡಬ್ಲ್ಯೂ–2 ರಂತೆ) | 25.00 | 0.50 | 3000.00 | 3 ತಿಂಗಳು |
| 7. | ಬಾಗೇಪಲ್ಲಿ ತಾಲ್ಲೂಕು, ಪಿ.ಬಿ.ಆರ್.ಸಿ.ಪಿ. ರಸ್ತೆಯ ಆಯ್ದಭಾಗಗಳಲ್ಲಿ ರಸ್ತೆ ಅಭಿವೃದ್ಧಿಪಡಿಸುವ ಕಾಮಗಾರಿ. (ಕೆ.ಡಬ್ಲ್ಯೂ–1 ರಂತೆ) | 10.00 | 0.25 | 1200.00 | 3 ತಿಂಗಳು |

1. ಟೆಂಡರ್ ಫಾರಂಗಳಿಗೆ ಅರ್ಜಿ ಸಲ್ಲಿಸಲು ಕಡೆಯ ದಿನಾಂಕ: 08.06.2009 (ಬೆಳಿಗ್ಗೆ – 10.30 ಗಂಟೆಯಿಂದ ಸಂಜೆ 5.00 ಗಂಟೆಯವರೆಗೆ)
2. ಖಾಲಿ ಟೆಂಡರ್ ಫಾರಂಗಳನ್ನು ನೀಡುವ ದಿನಾಂಕ: 12.06.2009 (ಬೆಳಿಗ್ಗೆ – 10.30 ಗಂಟೆಯಿಂದ ಸಂಜೆ 5.00 ಗಂಟೆಯವರೆಗೆ)
3. ಭರ್ತಿಮಾಡಿದ ಟೆಂಡರ್‌ಗಳನ್ನು ಸಲ್ಲಿಸಲು ಕಡೆಯ ದಿನಾಂಕ: 15.06.2009 (ಬೆಳಿಗ್ಗೆ – 10.30 ಗಂಟೆಯಿಂದ ಸಂಜೆ 4.00 ಗಂಟೆಯವರೆಗೆ)
4. ತಾಂತ್ರಿಕ ಬಿಡ್‌ಗಳನ್ನು ತೆರೆಯುವ ದಿನಾಂಕ: 15.06.2009 ಸಂಜೆ 4.30 ಗಂಟೆಗೆ (ಕಾಮಗಾರಿ ಕ್ರಮ ಸಂಖ್ಯೆ–1 ಮತ್ತು 2ಕ್ಕೆ ಅನ್ವಯವಾಗುತ್ತದೆ.)
   ಹೆಚ್ಚಿನ ಮಾಹಿತಿಯನ್ನು ಕಛೇರಿಯ ವೇಳೆಯಲ್ಲಿ ಪಡೆಯಬಹುದಾಗಿದೆ.

**ಸೂಚನೆ:** ಈ ಕಛೇರಿ ಟೆಂಡರ್ ಅಧಿಸೂಚನೆ ಸಂಖ್ಯೆ:24/08–09/ದಿನಾಂಕ:26.02.2009 (1ನೇ ಕರೆ) ರಲ್ಲಿ ಮೇಲಿನ ಕಾಮಗಾರಿಗಳಿಗೆ ಟೆಂಡರ್ ಆಹ್ವಾನಿಸಿದ್ದು ದಿನಾಂಕ: 02.03.2009 ರಂದು ಚುನಾವಣೆ ನೀತಿ ಸಂಹಿತೆ ಜಾರಿಯಾಗಿದ್ದರಿಂದ, ಟೆಂಡರ್ ಪ್ರಕಟಣೆಯು ಜಿಲ್ಲಾ ಟೆಂಡರ್ ಬುಲೆಟಿನ್‌ನಲ್ಲಿ ಪ್ರಕಟಿಸಿಲ್ಲವಾದ್ದರಿಂದ, ಸದರಿ ಟೆಂಡರನ್ನು ರದ್ದುಪಡಿಸಲಾಗಿದ್ದು, ಅಧಿಸೂಚನೆ ಸಂಖ್ಯೆ: 24/08–09/ದಿನಾಂಕ: 26.02.2009 (1ನೇ ಕರೆ) ರಲ್ಲಿ ಟೆಂಡರ್ ಫಾರಂಗಳಿಗೆ ಅರ್ಜಿ ಸಲ್ಲಿಸಿದ್ದ ಗುತ್ತಿಗೆದಾರರ ಅರ್ಜಿಗಳನ್ನು ಪರಿಗಣಿಸಲಾಗುವುದು.

ಪಿ.ಆರ್. 388 ಕಾರ್ಯನಿರ್ವಾಹಕ ಇಂಜಿನಿಯರ್, ಚಿಕ್ಕಬಳ್ಳಾಪುರ ಲೋ.ಇ. ವಿಭಾಗ, ಚಿಕ್ಕಬಳ್ಳಾಪುರ.

**BANGALORE DEVELOPMENT AUTHORITY**
**T.Chowdaiah Road, Kumarapark West, Bangalore-560 020.**
**INVITATION FOR SHORT TERM TENDERS**
**No.BDA/EE (Ele)/TEN/T-22/2009-10, Dated: 2nd June 2009**

**Sub:** Invitation of Tenders for street lighting works under BBMP Area (by e-tendering)

The Executive Engineer (Ele) Bangalore Development Authority, Bangalore invites tenders from eligible tenderers, for the works detailed in the Table below. The tenderers are permitted to quote for both the works. If any agency is found to have quoted the lowest in more than one work, the work for which the lowest percentage is quoted will be considered. The Tenderers are advised to note the minimum qualification criteria specified in Section 2 "Instructions To Tenderers" of K/W-4 of Standard Tender Documents to qualify for award of the contract. Tender documents may be obtained through our website http://www.bdabangalore.org/ by clicking on e-tender wizard which will link to http://pilottenderwizard.com/.

01. Last date for submitting applications for tender forms along with a non-refundable fee as indicated in the Table below, in the form of Demand Draft / Pay Order on any Nationalized / Scheduled bank payable at Bangalore in favour of Commissioner, Bangalore Development Authority, Bangalore is 10.06.2009 up to 4:00 PM.
02. The blank tender forms will be issued from 10.06.2009 to 12.06.2009 up to 4:00 PM
03. The last date for submission of tenders is on 15.06.2009 up to 4:00 PM and Tenders must be delivered through http://pilottenderwizard.com/.
04. Opening of Technical Bids of Two cover system tenders by the Executive Engineer (Ele), BDA, Bangalore is on 15.06.2009 at 4:30 PM or any other date will be intimated later.
05. Financial Bids of Two cover system tenders of only Technically qualified and Financially capable contractors will be opened on any other date and time to be intimated later.
06. Any clarifications can be had from this office between 3:30 PM to 5:30 PM on any working day.

**TABLE**

| Sl. No. | Name of the work | Approx. value of work (Rs. lakhs) | Earnest Money Deposit (Rs.) | Cost of document | Period of completion |
|---|---|---|---|---|---|
| 1. | Providing Sodium Vapour Lamp streetlight fittings, tube light fittings, Timers and control lines and providing 12.5 Mtr high mast lamps in Bommanahalli LAC | 177.33 | 2,66,000/- | 9,000/- | 3 Months |

**I. Additional Conditions:**

01. The Contractors should posses valid Class I Electrical License issued by the Electrical Inspectorate, Government of Karnataka.
02. Scope of work shall include supply, installing, testing servicing / commissioning of the lighting systems and handing over the entire system to BBMP under due acknowledgement. Final settlement of bills will be made only after production of acknowledgement.
03. The defect liability period shall be for a period of one year from the date handing over the work to BBMP. Further during the defect liability period the contractors shall be responsible for day to day maintenance of streetlights & the system executed by them at their own cost including replacement of faulty / fused out lamps, chokes, igniters, etc., and switching on/off of the lights where ever applicable. Penalty will be levied for non-attending to the streetlight complaints.
04. All light fittings, control panels etc., shall be painted with BDA work order No. date and the name of the contractor for identification and numbering shall be made on the poles as per the requirement of BBMP.

05. All released materials like streetlight fittings, control panels, poles etc., shall be handed over to the BBMP authorities under due acknowledgement.
06. Prior approval shall be obtained for the makes of streetlight fittings, underground cables, switches, MCB, contractors, etc. Stage inspection shall be arranged for tubular poles, panel boards and other fabrication items and approval shall be obtained prior to fabrication.
07. The work shall be executed as per the specifications / I E Rules 1956. The work also includes getting necessary statutory approvals from different departments like electrical inspectorate, BESCOM, BBMP etc. However the applicable payments if any will be made by BDA. All safety precautions including obtaining necessary line clears from BESCOM shall be observed strictly.

**08. Eligibility criteria:**

a) Any reputed and financially sound individual Firm/agency, Company having Electrical License for Class-I Contract having suitable technical, financial and managerial capabilities satisfying the following conditions are eligible to apply.
b) Tenders shall not be under a declaration of ineligibility for corrupt and fraudulent practices issued by the Government of Karnataka.
c) Tenders from Joint ventures are not acceptable.

**II. Qualification information:**

a) To qualify for award of this contract, each Tenderer in his name should have in the last five years i.e., 2003-2004 to 2007 – 2008.
   i) Achieved in at least two financial years a minimum financial turnover (in Electrical engineering works only) of at least two times the amount put to tender.
   ii) Satisfactory completed as prime contractor for at least one work of execution of street lighting work / power supply distribution work for the layouts to an extent of 80% of the cost of the work.
   In support of this, the tenderer should furnish a certificate duly certified by the competent authority not below the rank of Executive Engineer or competent authority authorized by the employer for having satisfactorily executed the work. Tender documents submitted without the requisite certificates issued by the competent authority will be summarily rejected.
b) Each Tenderer should further demonstrate:
   i) Availability by owning or by hiring at least two ladder mounted vans required for the work. Copies of relevant documents shall be furnished.
   ii) Liquid assets and / or availability of credit facilities of not less than the amount equivalent to amount put to tender (Credit lines / letter of credit / certificates from banks for meeting the fund requirement etc. to be furnished) in the prescribed format.

12. The intending contractors are requested to note that they should abide by the detailed instructions and conditions contained in the K/W 4 of Standard Tender Document (STD) PWD Code and further Government Orders there on as for as the eligibility criteria is concerned.
13. The BDA reserves the right to reject any or all applications without assigning any reasons.
14. Submission and opening of bids will be in the office of the Executive Engineer, Electrical Division, BDA, K P West, T Chowdaiah Road, Bangalore – 560 020.
15. Tax and Cess etc., will be deducted in R.A. bills as per Government Orders.
16. Bidders/ Contractors can access tender documents on the website, fill them and submit the completed tender document into electronic tender on the website itself. A Training programme on e-tendering will be conducted for the aspiring bidders/Contractors on 11.06.09 at BDA Head Office. Those who wish to undergo training should confirm through telephone with Electrical Division, BDA.
19. Original Credit Lines / Letter of Credit / Certificate from Banks, DD towards EMD shall be submitted to Executive Engineer, Electrical Division, BDA, Bangalore on or before 4:00 PM on 15.06.09 failing which the firm/contractor will be disqualified.
20. Bidders/Contractors shall attach all the scanned copies of certificates pertaining to their pre-qualification, failing which their tenders will be disqualified.

P.D. 73 Executive Engineer (Elec), Electrical Division, BDA, Bangalore.

**ಅರಣ್ಯ ಇಲಾಖೆ**
**ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಜಾಗೃತ) ಕಛೇರಿ,**
**ಅರಣ್ಯ ಭವನ, 18 ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು–560003 ದೂರವಾಣಿ: 080–23365562**
**ಅಲ್ಪಾವಧಿ ಟೆಂಡರ್ ನೋಟೀಸ್**
**ಉಲ್ಲೇಖ: ಬಿಯುಡಿ/ನಿಸ್ತಂತು/ಅಟೆಪ್ರ/ಸಿಆರ್/06/09–10, ದಿನಾಂಕ: 29ನೇ ಮೇ 2009**

ಕರ್ನಾಟಕ ಅರಣ್ಯ ಇಲಾಖೆಯಿಂದ 2009–10 ನೇ ಸಾಲಿಗೆ ಹೈಬ್ಯಾಂಡ್ ನಿಸ್ತಂತು (ಸ್ಟ್ಯಾಟಿಕ್ ರೇಡಿಯೋ, ಮೊಬೈಲ್ ಸೆಟ್, ರಿಪೀಟರ್ ಸ್ಟೇಷನ್ ಹಾಗೂ ವಾಕಿಟಾಕಿ) ಉಪಕರಣಗಳ ವಾರ್ಷಿಕ ನಿರ್ವಹಣೆಗಾಗಿ ಅಕ್ಷರಸ್ಥ ಹಾಗೂ ಅನುಭವಸ್ಥರಿಂದ ಮೊಹರು ಸಹಿತ ಟೆಂಡರನ್ನು ಕರೆಯಲಾಗಿದೆ. ಹೈಬ್ಯಾಂಡ್ ನಿಸ್ತಂತು ಉಪಕರಣಗಳ ನಿರ್ವಹಣೆಯ ಬಗ್ಗೆ ಹೆಚ್ಚಿನ ಮಾಹಿತಿಯನ್ನು ಹಾಗೂ ಟೆಂಡರ್ ಫಾರಂಗಳನ್ನು ಮೇಲೆ ಕಾಣಿಸಿದ ಕಛೇರಿಯಲ್ಲಿ ದಿನಾಂಕ: 15.07.2009ರ ಮಧ್ಯಾಹ್ನ 12.00 ಗಂಟೆಯವರೆಗೆ ಕಛೇರಿಯ ಕೆಲಸದ ಸಮಯದಲ್ಲಿ ರೂ. 250/– (ಎಲ್ಲಾ ತೆರಿಗೆಗಳು ಸೇರಿ) ಪಡೆಯಬಹುದಾಗಿದೆ. ಅದೇ ದಿನ ಮಧ್ಯಾಹ್ನ 3.00 ಗಂಟೆಗೆ ಟೆಂಡರನ್ನು ತೆರೆಯಲಾಗುವುದು. ಟೆಂಡರ್ ಫಾರಂನೊಂದಿಗೆ ಒಂದು ವಿಭಾಗಕ್ಕೆ (EMD) ರೂ. 4,000/– ಮೊತ್ತವನ್ನು ಡಿಡಿ ರೂಪದಲ್ಲಿ ಸಲ್ಲಿಸಬೇಕಾಗಿರುತ್ತದೆ. ಒಟ್ಟು 12 ವಿಭಾಗಗಳಿರುತ್ತವೆ. ಹೆಚ್ಚಿನ ವಿವರಗಳನ್ನು ದಿನಾಂಕ: 29.05.2009 ರ ಟೆಂಡರ್ ನೋಟಿಫಿಕೇಷನ್‌ನಲ್ಲಿ ನಮೂದಿಸಲಾಗಿದೆ.

**ಡಾ॥ ಎಸ್. ರಾಜೇಂದ್ರನ್**
ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಜಾಗೃತ) ಬೆಂಗಳೂರು

**KARNATAKA FOREST DEPARTMENT**
**Office of the Addl. Principal Chief Conservator of Forests (Vigilance)**
**Aranya Bhavan, 18th Cross, Malleshwaram, Bangalore – 03 Phone No. 080-23365562**
**Short Tender Notification**
**Ref. No. BUD/Wirelss/STT/CR/06/09-10, Date: 29th May 2009**

Sealed tenders are invited from the qualified / experienced people for the annual maintenance of the High band wireless (like static, Radio mobile sets, repeaters and Walky-talkies) sets for the year 2009-10 in the Karnataka Forest Department. The details of the wireless sets to be maintained and the tender forms can be had from the above office during the office hours on all working days, on payment of Rs. 250/- (Including Tax) until 12 pm on 15.07.2009. The tender will be opened at 3.00 pm on 15.07.2009. The EMD amount of Rs. 4,000/- for each unit has to be paid in the form of DD along with the tender form. There are 12 Units totally. For details see the tender notification dated 29.05.2009.

**Dr. S. Rajendran**
Addl. Principal Chief Conservator of Forests (Vigilance) Bangalore

**ಕರ್ನಾಟಕ ಅರಣ್ಯ ಇಲಾಖೆಯಲ್ಲಿ ನಿಸ್ತಂತು ಜಾಲದ ವಾರ್ಷಿಕ ನಿರ್ವಹಣೆ ಬಗ್ಗೆ ಕರೆದಿರುವ ಅಲ್ಪಾವಧಿ ಟೆಂಡರ್‌ನಲ್ಲಿ ಭಾಗವಹಿಸಲು ಇಚ್ಛಿಸುವವರು ಪಾಲಿಸ ಬೇಕಾದ ಷರತ್ತುಗಳು**

1. ನಿಸ್ತಂತು ಉಪಕರಣಗಳಾದ ಸಂಚಾರಿ, ಸ್ಥಿರ ಹಾಗೂ ವಾಕಿಟಾಕಿಗಳನ್ನು ಒಳಗೊಂಡಂತೆ, ಬೆಂಗಳೂರು, ಬೆಳಗಾಂ, ಕೆನರಾ, ಚಾಮರಾಜನಗರ, ಚಿಕ್ಕಮಗಳೂರು, ಧಾರವಾಡ, ಹಾಸನ, ಮಡಿಕೇರಿ, ಎಫ್‌ಡಿಪಿಟಿ ಮೈಸೂರು, ಮಂಗಳೂರು, ಮೈಸೂರು, ಶಿವಮೊಗ್ಗ ಈ ವೃತ್ತಗಳಲ್ಲಿ ಈ ಕೆಳಕಾಣಿಸಿದ ಹೈಬ್ಯಾಂಡ್ ನಿಸ್ತಂತು ಜಾಲವನ್ನು ಸಮರ್ಪಕವಾಗಿ ಕೆಲಸ ನಿರ್ವಹಿಸುವಂತೆ ನೋಡಿಕೊಳ್ಳುವುದು. ಸದರಿ ನಿಸ್ತಂತು ಉಪಕರಣಗಳನ್ನು ಹೊಸದಾಗಿ ಸೇರ್ಪಡೆ ಮತ್ತು ಹಳೆಯ ನಿಸ್ತಂತು ಉಪಕರಣಗಳನ್ನು ಬದಲಾಯಿಸುವುದರಿಂದ ನಿಸ್ತಂತು ಉಪಕರಣಗಳ ವರ್ಷವಾರು ಸಂಖ್ಯೆಯು ಹೆಚ್ಚು ಕಡಿಮೆ ಆಗುವ ಸಂಭವವಿರುತ್ತದೆ.

**ಕರ್ನಾಟಕ ಅರಣ್ಯ ಇಲಾಖೆಯ ನಿಸ್ತಂತು ಜಾಲದ ವಿವರಗಳು**

(ಮೊತ್ತ ರೂಗಳಲ್ಲಿ)

| ಕ್ರ.ಸಂ. | ವೃತ್ತದ ಹೆಸರು | ವಿಭಾಗದ ಹೆಸರು | ಸ್ಟ್ಯಾಟಿಕ್ | ನಿಸ್ತಂತು | ಮರು ಪ್ರಸರಣ ಕೇಂದ್ರ | ವಾಕಿಟಾಕಿ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | ಬೆಂಗಳೂರು | ಕೋಲಾರ | 5 | 2 | – | 15 |
| | | ಚಿಕ್ಕಬಳ್ಳಾಪುರ | 6 | 3 | 1 | 22 |
| | | ಬೆಂಗಳೂರು ಗ್ರಾಮಾಂತರ | 9 | 3 | 1 | 13 |
| | | ಬೆಂಗಳೂರು ನಗರ | 2 | 4 | 1 | 20 |
| | | ರಾಮನಗರ | – | 3 | – | 20 |
| | | ಬನ್ನೇರುಘಟ್ಟ | – | 6 | – | 52 |
| | | ಅರಣ್ಯ ಭವನ | – | 41 | – | – |
| | | | **22** | **62** | **3** | **142** |
| **ಒಟ್ಟು ಅಂದಾಜು ಮೊತ್ತ ರೂ. 81,600.00** | | | **14,080** | **14,880** | **7,200** | **45,440** |
| **ಇಎಂಡಿ ರೂ. 4,000.00** | | | | | | |

| 1 | 2 | 3 | 4 | 5 | 6 | 7 |
|---|---|---|---|---|---|---|
| 2 | ಬೆಳಗಾಂ | ಬೆಳಗಾಂ | 17 | 7 | 2 | 73 |
| | | ಗೋಕಾಕ್ | 5 | 3 | 1 | – |
| | | ಬಿಜಾಪುರ | 3 | 1 | – | – |
| | | ಬಾಗಲಕೋಟೆ | 3 | 1 | – | – |
| | | | **28** | **12** | **3** | **73** |
| **ಒಟ್ಟು ಅಂದಾಜು ಮೊತ್ತ ರೂ. 51,360.00** | | | **17,920** | **2,880** | **7,200** | **23,360** |
| **ಇಎಂಡಿ ರೂ. 4,000.00** | | | | | | |
| 3 | ಉತ್ತರ ಕನ್ನಡ | ಶಿರಸಿ | 9 | 9 | 4 | 45 |
| | | ದಾಂಡೇಲಿ ವನ್ಯಜೀವಿ | 13 | 12 | 4 | 55 |
| | | ಕಾರವಾರ | 8 | 4 | 2 | 30 |
| | | ಯಲ್ಲಾಪುರ | 6 | 5 | 2 | 30 |
| | | ಹಳಿಯಾಳ | 8 | 5 | 2 | 55 |
| | | ಹೊನ್ನಾವರ | 9 | 6 | 2 | 30 |
| | | | **53** | **41** | **16** | **245** |
| **ಒಟ್ಟು ಅಂದಾಜು ಮೊತ್ತ ರೂ. 1,60,560.00** | | | **33,920** | **9,840** | **38,400** | **78,400** |
| **ಇಎಂಡಿ ರೂ. 4,000.00** | | | | | | |
| 4 | ಚಾಮರಾಜನಗರ | ಚಾಮರಾಜನಗರ ವನ್ಯಜೀವಿ | 27 | 10 | 1 | 60 |
| | | ಕಾವೇರಿ ವನ್ಯಜೀವಿ | 8 | 8 | 1 | 20 |
| | | ಕೊಳ್ಳೇಗಾಲ | 8 | 6 | 3 | 32 |
| | | | **43** | **24** | **5** | **112** |
| **ಒಟ್ಟು ಅಂದಾಜು ಮೊತ್ತ ರೂ. 81,120.00** | | | **27,520** | **5,760** | **12,000** | **35,840** |
| **ಇಎಂಡಿ ರೂ. 4,000.00** | | | | | | |
| 5 | ಚಿಕ್ಕಮಗಳೂರು | ಕೊಪ್ಪ | 13 | 11 | 2 | 43 |
| | | ಭದ್ರಾ ವನ್ಯಜೀವಿ | 36 | 16 | 2 | 74 |
| | | ಚಿಕ್ಕಮಗಳೂರು | 7 | 10 | 1 | 35 |
| | | | **56** | **37** | **5** | **152** |
| **ಒಟ್ಟು ಅಂದಾಜು ಮೊತ್ತ ರೂ. 1,05,360.00** | | | **35,840** | **8,880** | **12,000** | **48,640** |
| **ಇಎಂಡಿ ರೂ. 4,000.00** | | | | | | |
| 6 | ಧಾರವಾಡ | ಧಾರವಾಡ | 3 | 8 | 2 | 16 |
| | | ಗದಗ | 2 | 2 | 1 | 13 |
| | | ಹಾವೇರಿ | 4 | 4 | – | 7 |
| | | | **9** | **14** | **3** | **36** |
| **ಒಟ್ಟು ಅಂದಾಜು ಮೊತ್ತ ರೂ. 27,840.00** | | | **5,760** | **3,360** | **7,200** | **11,520** |
| **ಇಎಂಡಿ ರೂ. 4,000.00** | | | | | | |
| 7 | ಹಾಸನ | ಹಾಸನ | 14 | 9 | – | 26 |
| | | ತುಮಕೂರು | 9 | 4 | 1 | 23 |
| | | | **23** | **13** | **1** | **49** |
| **ಒಟ್ಟು ಅಂದಾಜು ಮೊತ್ತ ರೂ. 35,920.00** | | | **14,720** | **3,120** | **2,400** | **15,680** |
| **ಇಎಂಡಿ ರೂ. 4,000.00** | | | | | | |
| 8 | ಮಡಿಕೇರಿ | ಮಡಿಕೇರಿ ವನ್ಯಜೀವಿ | 8 | 3 | 1 | 13 |
| | | ಮಡಿಕೇರಿ | 7 | 6 | 1 | 30 |
| | | ವಿರಾಜಪೇಟೆ | 5 | 4 | 1 | 30 |
| | | | **20** | **13** | **3** | **73** |
| **ಒಟ್ಟು ಅಂದಾಜು ಮೊತ್ತ ರೂ. 46,480.00** | | | **12,800** | **3,120** | **7,200** | **23,360** |
| **ಇಎಂಡಿ ರೂ. 4,000.00** | | | | | | |

| 1 | 2 | 3 | 4 | 5 | 6 | 7 |
|---|---|---|---|---|---|---|
| 9 | ಎಫ್.ಡಿ.ಪಿ.ಟಿ ಮೈಸೂರು | ಬಂಡೀಪುರ ನ್ಯಾಷನಲ್ ಪಾರ್ಕ್ | 27 | 14 | 2 | 116 |
| | | ಹುಣಸೂರು ನ್ಯಾಷನಲ್ ಪಾರ್ಕ್ | 18 | 15 | 1 | 102 |
| | | | **45** | **29** | **3** | **218** |
| **ಒಟ್ಟು ಅಂದಾಜು ಮೊತ್ತ ರೂ. 1,12,720.00** | | | **28,800** | **6,960** | **7,200** | **69,760** |
| **ಇಎಂಡಿ ರೂ. 4,000.00** | | | | | | |
| 10 | ಮಂಗಳೂರು | ಮಂಗಳೂರು | 15 | 11 | 2 | 30 |
| | | ಕುಂದಾಪುರ | 10 | 13 | 2 | 63 |
| | | ಕಾರ್ಕಳ ವನ್ಯಜೀವಿ | 10 | 10 | 6 | 68 |
| | | | **35** | **34** | **10** | **161** |
| **ಒಟ್ಟು ಅಂದಾಜು ಮೊತ್ತ ರೂ. 1,06,080.00** | | | **22,400** | **8,160** | **24,000** | **51,520** |
| **ಇಎಂಡಿ ರೂ. 4,000.00** | | | | | | |
| 11 | ಮೈಸೂರು | ಮೈಸೂರು | 9 | 16 | 1 | 65 |
| | | ಮಂಡ್ಯ | 8 | 7 | 1 | 30 |
| | | ಹುಣಸೂರು | 3 | 2 | – | 28 |
| | | ಮೈಸೂರು ವನ್ಯಜೀವಿ | 2 | 2 | – | 20 |
| | | | **22** | **27** | **2** | **143** |
| **ಒಟ್ಟು ಅಂದಾಜು ಮೊತ್ತ ರೂ. 71,120.00** | | | **14,080** | **6,480** | **4,800** | **45,760** |
| **ಇಎಂಡಿ ರೂ. 4,000.00** | | | | | | |
| 12 | ಶಿವಮೊಗ್ಗ | ಶಿವಮೊಗ್ಗ | 8 | 12 | – | 46 |
| | | ಶಿವಮೊಗ್ಗ ವನ್ಯಜೀವಿ | 7 | 8 | 3 | 51 |
| | | ಸಾಗರ | 17 | 7 | 1 | 48 |
| | | ಭದ್ರಾವತಿ | 12 | 7 | 1 | 40 |
| | | | **44** | **34** | **5** | **185** |
| **ಒಟ್ಟು ಅಂದಾಜು ಮೊತ್ತ ರೂ. 1,07,520.00** | | | **28,160** | **8,160** | **12,000** | **59,200** |
| **ಇಎಂಡಿ ರೂ. 4,000.00** | | | | | | |

2. ಟೆಂಡರ್‌ದಾರರು ರಾಜ್ಯ/ಕೇಂದ್ರ ಸರ್ಕಾರಗಳ ಇಲಾಖೆಗಳೊಂದಿಗಿನ ಕನಿಷ್ಠ 2 ವರ್ಷ ನಿಸ್ತಂತು ಜಾಲದ ನಿರ್ವಹಣೆ ಅನುಭವ ಹೊಂದಿರಬೇಕು. ಇದಕ್ಕೆ ಸಂಬಂಧಿಸಿದಂತಹ ದೃಢೀಕರಣ ಪತ್ರವನ್ನು ಸಂಬಂಧಪಟ್ಟ ಇಲಾಖೆಯಿಂದ ಪಡೆದು ಒಡಂಬಡಿಕೆ ಮಾಡಿಕೊಳ್ಳುವ ಸಮಯದಲ್ಲಿ ಹಾಜರುಪಡಿಸತಕ್ಕದ್ದು.
3. ಭಾಗವಹಿಸುವ ಟೆಂಡರುದಾರರು ರಾಜ್ಯ/ಕೇಂದ್ರ ವಾಣಿಜ್ಯ ತೆರಿಗೆ ಇಲಾಖೆಯಲ್ಲಿ ನೊಂದಾಯಿತರಾಗಿರಬೇಕು.
4. ಪ್ರತಿ 3 ತಿಂಗಳಿಗೊಮ್ಮೆ ನಿರ್ವಹಣೆ ವೆಚ್ಚದ ಬಿಲ್ಲನ್ನು ಪಾವತಿ ಮಾಡಲಾಗುವುದು. ನಿರ್ವಹಣೆ ಬಿಲ್ಲನ್ನು ಈ ಕಛೇರಿಗೆ ತಲುಪಿಸುವಾಗ ಸಂಬಂಧಪಟ್ಟ ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಂದ ನಿಸ್ತಂತು ಜಾಲದ ನಿರ್ವಹಣೆ ಬಗ್ಗೆ ತೃಪ್ತಿಕರ ಪ್ರಮಾಣ ಪತ್ರವನ್ನು ಪಡೆದು ಬಿಲ್ಲಿನೊಂದಿಗೆ ಸಲ್ಲಿಸುವುದು. ತೆರಿಗೆ ಹಾಗೂ ಒಟ್ಟು ನಿಸ್ತಂತು ಉಪಕರಣಗಳ ಸಂಖ್ಯೆಯ ಆಧಾರದ ಮೇಲೆ ನಿರ್ವಹಣಾ ವೆಚ್ಚದ ಬಿಲ್ಲನ್ನು ಪಾವತಿಸಲಾಗುವುದು.
5. ನಿಸ್ತಂತು ಜಾಲವು ದುರಸ್ಥಿಗೆ ಬಂದಿರುವ ವಿಷಯವು ತಿಳಿದ ಗರಿಷ್ಠ 48 ಘಂಟೆಗಳೊಗೆ ಅದನ್ನು ದುರಸ್ಥಿ ಪಡಿಸಬೇಕಾಗಿರುತ್ತದೆ.
6. ಅರಣ್ಯ ಇಲಾಖೆಯಿಂದ ನಿಸ್ತಂತು ಜಾಲದ ನಿರ್ವಹಣೆ ಕೆಲಸಕ್ಕೆ ಯಾವುದೇ ಸಾರಿಗೆ ವೆಚ್ಚ ಅಥವಾ ವಾಹನ ಸೌಲಭ್ಯವನ್ನು ಕಲ್ಪಿಸಲಾಗುವುದಿಲ್ಲ.
7. ನಿಸ್ತಂತು ಉಪಕರಣಗಳಾದ ಬಿಡಿ ಭಾಗಗಳಾದ ಜಿಪಿ ಆಂಟೀನಾ, ಆರ್.ಎಫ್ ಕೇಬಲ್, ಮೊಬೈಲ್ ಆಂಟೀನಾ, ಬ್ಯಾಟರಿ, ಬ್ಯಾಟರಿ ಪ್ಯಾಕ್, ಮುಂತಾದವುಗಳನ್ನು ಈ ಕಛೇರಿಯಿಂದ ಒದಗಿಸಲಾಗುತ್ತಿದ್ದು, ಇವುಗಳ ಬದಲಾವಣೆಗೆ ಯಾವುದೇ ತರಹದ ವೆಚ್ಚವನ್ನು ನೀಡಲಾಗುವುದಿಲ್ಲ.
8. ನಿಸ್ತಂತು ಉಪಕರಣದ ದುರಸ್ಥಿಗೆ ಸಂಬಂಧಿಸಿದಂತೆ ಉಪಕರಣದ ಗರಿಷ್ಠ ಶೇಕಡ 50% ರಷ್ಟು ಬೆಲೆಯವರೆಗೆ ಯಾವುದೇ ವೆಚ್ಚವನ್ನು ನೀಡಲಾಗುವುದಿಲ್ಲ

9. ತ್ರಿಭುಜಾಕಾರ ಗೋಪುರ ಹಾಗೂ ಒಂದು ಕಂಬದ ಗೋಪುರದ (Tripod Antenna Tower and Pole Mast) ಸ್ಥಳಾಂತರ ಹಾಗೂ ಹೊಸದಾಗಿ ಒದಗಿಸಿ ಅಳವಡಿಸುವುದನ್ನು ಬಿಟ್ಟರೆ ನಿರ್ವಹಣೆಗಾಗಿ ಬೇರೆ ಯಾವುದೇ ವೆಚ್ಚವನ್ನು ನೀಡಲಾಗುವುದಿಲ್ಲ.
10. ಸ್ವೀಕೃತ ಟೆಂಡರುದಾರರು ನಿಸ್ತಂತು ಉಪಕರಣಗಳ ನಿರ್ವಹಣೆಯ ನಿಬಂಧನೆ ಮತ್ತು ಷರತ್ತುಗಳನ್ನು ಒಪ್ಪಿಕೊಂಡು ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಜಾಗೃತ), ಬೆಂಗಳೂರು ರವರ ಜೊತೆ ಕರಾರು ಪತ್ರಕ್ಕೆ ಸಹಿ ಹಾಕಬೇಕಾಗಿರುತ್ತದೆ.
11. ಟೆಂಡರುದಾರರು ನಿಸ್ತಂತು ಉಪಕರಣಗಳಾದ ಮೊಬೈಲ್, ಸ್ಟ್ಯಾಟಿಕ್, ವಾಕಿಟಾಕಿಗಳಿಗೆ ಪ್ರತ್ಯೇಕವಾಗಿ ಉಪಕರಣವಾರು ರೂಪಾಯಿಗಳಲ್ಲಿ ಬೆಲೆಯನ್ನು ವಿಭಾಗ/ವೃತ್ತವಾರು ನಮೂದಿಸಬೇಕು.
12. ಸ್ವೀಕೃತ ಟೆಂಡರುದಾರರು ಅಂದಾಜು ಟೆಂಡರ್ ಮೊತ್ತಕ್ಕೆ ರೂ. 4,000/– ಗಳ ಬ್ಯಾಂಕ್ ಡಿಡಿಯನ್ನು ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಜಾಗೃತ), ಬೆಂಗಳೂರು ಇವರ ಹೆಸರಿಗೆ ಬ್ಯಾಂಕ್ ಡಿಡಿಯನ್ನು ತೆಗೆದುಕೊಳ್ಳುವುದು.
13. ಸ್ವೀಕೃತ ಟೆಂಡರದಾರರು ಟೆಂಡರ್ ಮೊತ್ತದ ಶೇಕಡಾ 5 ರಷ್ಟು ಹಣವನ್ನು ರಾಷ್ಟ್ರೀಯ ಸೇವಾ ಪ್ರಮಾಣ ಪತ್ರ (ಎನ್.ಎಸ್.ಸಿ) ಅಥವಾ ನಿಶ್ಚಿತ ಠೇವಣಿ ರೂಪದಲ್ಲಿ ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಜಾಗೃತ), ಬೆಂಗಳೂರು ರವರ ಹೆಸರಿನಲ್ಲಿ ಜಂಟೀ ಖಾತೆಯಲ್ಲಿ ಒಂದು ವರ್ಷ ಅವಧಿಗೆ ಅಡಮಾನ ಇಡತಕ್ಕದ್ದು.
14. ಭಾಗಶ: ಟೆಂಡರುಗಳನ್ನು ತಿರಸ್ಕರಿಸಲಾಗುವುದು. ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಜಾಗೃತ), ಬೆಂಗಳೂರು ರವರ ತೆಗೆದುಕೊಳ್ಳುವ ನಿರ್ಧಾರವು ಅಂತಿಮವಾಗಿರುತ್ತದೆ. ಯಾವುದೇ ಕಾರಣ ನೀಡದೆ ಅಂಗೀಕರಿಸುವ ಹಾಗೂ ತಿರಸ್ಕರಿಸುವ ಅಧಿಕಾರವನ್ನು ಹೊಂದಿರುತ್ತಾರೆ.
15. ನಿಸ್ತಂತು ಜಾಲದ ನಿರ್ವಹಣೆಗಾಗಿ ಟೆಂಡರದಾರರು ನೇಮಿಸಿಕೊಳ್ಳುವ ಕೆಲಸಗಾರರಿಗೆ ವೇತನ ಹಾಗೂ ಅಪಘಾತಗಳಿಗೆ ಕರ್ನಾಟಕ ಅರಣ್ಯ ಇಲಾಖೆ ಜವಾಬ್ದಾರರಾಗಿರುವುದಿಲ್ಲ ಎಂಬ ವಿಷಯವನ್ನು ತಿಳಿಯುವುದು.
16. ಈ ಟೆಂಡರ್ ಹಾಗೂ ಟೆಂಡರ್ ಮೊತ್ತ ಸ್ವೀಕರಿಸಿದ ದಿನಾಂಕದಿಂದ ಎರಡು ವರ್ಷಗಳ ಕಾಲಮಿತಿಯಲ್ಲಿರುತ್ತದೆ.
17. ಸ್ವೀಕೃತ ಟೆಂಡರ್‌ದಾರರು ಕಳಪೆ ಕಾಮಗಾರಿ ಅಥವಾ ಅಸಮರ್ಪಕವಾದ ಕೆಲಸ ನಿರ್ವಹಿಸಿದ್ದು ಕಂಡುಬಂದಲ್ಲಿ ಈ ಕೆಳಸಹಿದಾರರು ಟೆಂಡರಿನ ಕರಾರುಪತ್ರವನ್ನು ರದ್ದು ಪಡಿಸುವ ಮುಕ್ತ ಅಧಿಕಾರವನ್ನು ಹೊಂದಿರುತ್ತಾರೆ.

ಸ್ಥಳ: ಬೆಂಗಳೂರು **ಡಾ|| ಎಸ್. ರಾಜೇಂದ್ರನ್**

ದಿನಾಂಕ: 29.05.2009 ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಜಾಗೃತ) ಬೆಂಗಳೂರು

**Detail Tender Notification for Annual maintenance of Wireless Communication Network in Karnataka Forest Department**

1. Sealed tenders are invited for the maintenance of the Wireless Sets, like Static, Mobile and Walkie-Talkie in the 1. Bangalore 2. Belgaum 3. Canara 4. Chamrajnagar 5. Chikkamagalore 6. Dharwad 7. Hassan 8. Madikeri 9. FDPT, Mysore 10. Mangalore 11. Mysore 12. Shimoga installed in the forest areas of these Circles, as shown in the following table. The number of sets may increase or decrease during the year as and when new sets are added and old stets are removed as the case may be.

**Details of Wireless sets, EMD and the estimated cost of maintenance**

(Amount in Rupees)

| Sl.No. | Name of the Circles/Units | Divisions | Staticssets | Mobiles | Repeaters | Walkie talkies |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | Bangalore | Kolar | 5 | 2 | - | 15 |
| | | Chikkaballapur | 6 | 3 | 1 | 22 |
| | | Bangalore Rural | 9 | 3 | 1 | 13 |
| | | Bangalore Urban | 2 | 4 | 1 | 20 |
| | | Ramanagar | - | 3 | - | 20 |
| | | Bannerugatta | - | 6 | - | 52 |
| | | Aranya Bhavan | - | 41 | - | - |
| | | | **22** | **62** | **3** | **142** |
| **Estimated Amount Rs. 81,600.00** | | | **14,080** | **14,880** | **7,200** | **45,440** |
| **EMD Amount Rs. 4,000.00** | | | | | | |
| 2 | Belgaum | Belguam | 17 | 7 | 2 | 73 |
| | | Gokak | 5 | 3 | 1 | - |
| | | Bijapur | 3 | 1 | - | - |
| | | Bagalakote | 3 | 1 | - | - |
| | | | **28** | **12** | **3** | **73** |
| **Estimated Amount Rs. 51,360.00** | | | **17,920** | **2,880** | **7,200** | **23,360** |
| **EMD Amount Rs. 4,000.00** | | | | | | |

| 1 | 2 | 3 | 4 | 5 | 6 | 7 |
|---|---|---|---|---|---|---|
| 3 | Canara | Sirsi | 9 | 9 | 4 | 45 |
| | | Dandeli Wild Life | 13 | 12 | 4 | 55 |
| | | Karwar | 8 | 4 | 2 | 30 |
| | | Yellapur | 6 | 5 | 2 | 30 |
| | | Haliyal | 8 | 5 | 2 | 55 |
| | | Honnavar | 9 | 6 | 2 | 30 |
| | | | **53** | **41** | **16** | **245** |
| **Estimated Amount Rs. 1,60,560.00** | | | **33,920** | **9,840** | **38,400** | **78,400** |
| **EMD Amount Rs. 4,000.00** | | | | | | |
| 4 | Chamrajnagar | Chamrajnagar Wild Life | 27 | 10 | 1 | 60 |
| | | Kaveri Wild Life | 8 | 8 | 1 | 20 |
| | | Kollegal | 8 | 6 | 3 | 32 |
| | | | **43** | **24** | **5** | **112** |
| **Estimated Amount Rs. 81,120.00** | | | **27,520** | **5,760** | **12,000** | **35,840** |
| **EMD Amount Rs. 4,000.00** | | | | | | |
| 5 | Chikkamagalore | Koppa | 13 | 11 | 2 | 43 |
| | | Bhadra Wild Life | 36 | 16 | 2 | 74 |
| | | Chikkamagalore | 7 | 10 | 1 | 35 |
| | | | **56** | **37** | **5** | **152** |
| **Estimated Amount Rs. 1,05,360.00** | | | **35,840** | **8,880** | **12,000** | **48,640** |
| **EMD Amount Rs. 4,000.00** | | | | | | |
| 6 | Dharwad | Dharwad | 3 | 8 | 2 | 16 |
| | | Gadag | 2 | 2 | 1 | 13 |
| | | Haveri | 4 | 4 | - | 7 |
| | | | **9** | **14** | **3** | **36** |
| **Estimated Amount Rs. 27,840.00** | | | **5,760** | **3,360** | **7,200** | **11,520** |
| **EMD Amount Rs. 4,000.00** | | | | | | |
| 7 | Hassan | Hassan | 14 | 9 | - | 26 |
| | | Tumkur | 9 | 4 | 1 | 23 |
| | | | **23** | **13** | **1** | **49** |
| **Estimated Amount Rs. 35,920.00** | | | **14,720** | **3,120** | **2,400** | **15,680** |
| **EMD Amount Rs. 4,000.00** | | | | | | |
| 8 | Madikeri | Madikeri Wild Life | 8 | 3 | 1 | 13 |
| | | Madikeri | 7 | 6 | 1 | 30 |
| | | Virajpet | 5 | 4 | 1 | 30 |
| | | | **20** | **13** | **3** | **73** |
| **Estimated Amount Rs. 46,480.00** | | | **12,800** | **3,120** | **7,200** | **23,360** |
| **EMD Amount Rs. 4,000.00** | | | | | | |
| 9 | FDPT, Mysore | Bandipur National Park | 27 | 14 | 2 | 116 |
| | | Hunsur National Park | 18 | 15 | 1 | 102 |
| | | | **45** | **29** | **3** | **218** |
| **Estimated Amount Rs. 1,12,720.00** | | | **28,800** | **6,960** | **7,200** | **69,760** |
| **EMD Amount Rs. 4,000.00** | | | | | | |
| 10 | Mangalore | Mangalore | 15 | 11 | 2 | 30 |
| | | Kundapur | 10 | 13 | 2 | 63 |
| | | Karkala Wild Life | 10 | 10 | 6 | 68 |
| **Total** | | | **35** | **34** | **10** | **161** |
| **Total Amount Rs. 1,06,080.00** | | | **22,400** | **8,160** | **24,000** | **51,520** |
| **EMD Amount Rs. 4,000.00** | | | | | | |

| 1 | 2 | 3 | 4 | 5 | 6 | 7 |
|---|---|---|---|---|---|---|
| 11 | Mysore | Mysore | 9 | 16 | 1 | 65 |
| | | Mandya | 8 | 7 | 1 | 30 |
| | | Hunsur | 3 | 2 | - | 28 |
| | | Mysore Wild Life | 2 | 2 | - | 20 |
| | | | **22** | **27** | **2** | **143** |
| **Total Amount Rs. 71,120.00** | | | **14,080** | **6,480** | **4,800** | **45,760** |
| **EMD Amount Rs. 4,000.00** | | | | | | |
| 12 | Shimoga | Shimoga | 8 | 12 | - | 46 |
| | | Shimoga Wild Life | 7 | 8 | 3 | 51 |
| | | Sagar | 17 | 7 | 1 | 48 |
| | | Bhadravathi | 12 | 7 | 1 | 40 |
| | | | **44** | **34** | **5** | **185** |
| **Estimated Amount Rs. 1,07,520.00** | | | **28,160** | **8,160** | **12,000** | **59,200** |
| **EMD Amount Rs. 4,000.00** | | | | | | |

2. The Tenderer should have atleast minimum two years of Wireless maintenance experience in any State/Central Government Departments. Experience certificate should be produced at the time of agreement.
3. Participating Tenderer should have registered with the Central/State Commercial Tax and VAT.
4. The maintenance Certificates duly signed by the respective Deputy Conservator of Forests of the different forest divisions in the Forest Circle must be produced once in 3 month for making payment. The Payment will be made as per the number of sets maintained in each division and subject to Statutory Tax Deductions.
5. Any complaints from the respective Deputy Conservator of Forests of forest divisions to maintain the Wireless Sets should be attended to within 48 hours.
6. No vehicle or conveyance allowance will be given from the Department for carrying out the maintenance works.
7. No extra payments will be made for the replacement of spares such as RF Cable, GP Antenna, Mobile Antenna, Battery, Battery Packs etc. Such spare will be supplied from this office.
8. No extra payment will be made towards the repairs of Wireless Sets if the repair cost is upto 50% of the cost of the Wireless Set.
9. No Extra Payment will be made for the maintenance of Tripod Antenna Towers and Pole Mast except replacement or shifting and installation.
10. The Successful Tender should execute an agreement with the Addl. Principal Chief Conservator of Forests (Vigilance) Bangalore accepting the terms and conditions of maintenance.
11. Tenderers are instructed to quote the rate in Rupees for individual wireless sets like Mobile, Static and Walkie Talkies in each units/circles.
12. Intending Tenderers should take Bank DD in favour of the Addl. Principal Chief Conservator of Forests (Vigilance) Bangalore for EMD which should be paid for every unit (Rs. 4,000/-)
13. Successful Tenderers should pledge 5% of tender amount in the form of NSC or Bank Fixed deposit in the joint names of the Addl. Principal Chief Conservator of Forests (Vigilance) Bangalore for 1 Year.
14. Incomplete Tenders will be rejected. The decision of the Addl. Principal Chief Conservator of Forests (Vigilance) Bangalore will be final. The Addl. Principal Chief Conservator of Forests (Vigilance) Bangalore has every right to accept or reject the tender without assigning any reason.
15. The Karnataka Forest Department will not be responsible for the wages and the accidents of workers engaged during the maintenance work.
16. This tender rate received will be valid for two years from the date of acceptance.
17. The undersigned has the liberty to terminate the contractor at any time for poor quality/unsatisfactory work.

Bangalore
Dated: 29.05.2009
P.R. 383

**Dr. S. Rajendran**
APCCF (Vigilance)

# ಪೊಲೀಸ್ ಇಲಾಖೆ

## PSI (CIVIL) - 2009

## (ISO:9001-2000 ಪ್ರಮಾಣಿತ ನೇಮಕಾತಿ ಪ್ರಕ್ರಿಯೆ)

**ಅಧಿಸೂಚನೆ ಸಂಖ್ಯೆ.32/ನೇಮಕಾತಿ/2009-10, ದಿನಾಂಕ: 10ನೇ ಜೂನ್ 2009**

**ವಿಷಯ: ಪೊಲೀಸ್ ಸಬ್ ಇನ್ಸ್‌ಪೆಕ್ಟರ್ (ಸಿವಿಲ್), ಮಹಿಳಾ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ಸೇವೆಯಲ್ಲಿರುವವರು ಒಳಗೊಂಡಂತೆ ಹುದ್ದೆಗಳಿಗೆ ನೇರ ನೇಮಕಾತಿ ಕುರಿತು.**

ಕರ್ನಾಟಕ ರಾಜ್ಯದ, ಪೊಲೀಸ್ ಇಲಾಖೆಯಲ್ಲಿ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ (ಸಿವಿಲ್), ಮಹಿಳಾ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ಹಾಗೂ ಸೇವೆಯಲ್ಲಿರುವವರು ಒಳಗೊಂಡಂತೆ ಹುದ್ದೆಗಳ ನೇರ ನೇಮಕಾತಿಗಾಗಿ ಕರ್ನಾಟಕ ರಾಜ್ಯ ಪೊಲೀಸ್ ಲಿಪಿಕ ನೌಕರರ ಸೇವೆಗಳು ಸೇರಿದಂತೆ (ನೇಮಕಾತಿ) ನಿಯಮ 2004 ಮತ್ತು (ತಿದ್ದುಪಡಿ) ನಿಯಮಗಳು 2009, ಅಧಿಸೂಚನೆ ಸಂಖ್ಯೆ.ಹೆಚ್‌ಡಿ/282/ಪೊಸಿಅ/2008, ದಿನಾಂಕ 28.05.2009, ಕರ್ನಾಟಕ ನಾಗರಿಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಾವಳಿ 1977 ಹಾಗು ಮೇಲೆ ತಿಳಿಯಪಡಿಸಿದ ನಿಯಮಗಳಿಗೆ ಕಾಲಕಾಲಕ್ಕೆ ಆಗುವ ತಿದ್ದುಪಡಿಗಳ ಅನುಸಾರ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

**1.** <u>ಅರ್ಜಿ ಸಲ್ಲಿಸುವ ವಿಧಾನ</u>: ಈ ಬಾರಿ ಅರ್ಜಿಗಳನ್ನು 07 ಕೇಂದ್ರಗಳಲ್ಲಿ ಮಾರಾಟ ಮಾಡುವುದಲ್ಲದೇ ಆನ್-ಲೈನ್ (On-line) (ಎಲೆಕ್ಟ್ರಾನಿಕ್ ಮಾರ್ಗ) ಮುಖಾಂತರವೂ ಸಹ ಕರೆಯಲಾಗಿದೆ.

ಎ) <u>ಶುಲ್ಕ :</u>

| ಅಭ್ಯರ್ಥಿಗಳು ಈ ಕೆಳಕಂಡ ವರ್ಗಗಳಿಗೆ ಸೇರಿದವರಾಗಿದ್ದರೆ, ಅದರ ಮುಂದೆ ನಮೂದಿಸಿರುವ ಅರ್ಜಿ / ಪರೀಕ್ಷಾ ಶುಲ್ಕವನ್ನು ಪಾವತಿಸುವುದು | ಆನ್‌ಲೈನ್ | | ಖುದ್ದಾಗಿ | |
|---|---|---|---|---|
| | ಅರ್ಜಿ ಶುಲ್ಕ | ಪರೀಕ್ಷಾ ಶುಲ್ಕ | ಅರ್ಜಿ ಶುಲ್ಕ | ಪರೀಕ್ಷಾ ಶುಲ್ಕ |
| ಪ.ಜಾ, ಪ.ಪಂ, ಪ್ರವರ್ಗ–1 | ರೂ.75/– | ರೂ.100/– | ರೂ.150/– | ರೂ.100/– |
| ಬ್ಯಾಂಕ್ ಶುಲ್ಕ | ರೂ.25/– | | | |
| ಒಟ್ಟು | ರೂ.100/– | | | |
| ಇತರೆ | ರೂ.75/– | ರೂ.250/– | ರೂ.150/– | ರೂ.250/– |
| ಬ್ಯಾಂಕ್ ಶುಲ್ಕ | ರೂ.25/– | | | |
| ಒಟ್ಟು | ರೂ.100/– | | | |

<u>**ಟಿಪ್ಪಣಿ:**</u> ಒಮ್ಮೆ ಪರೀಕ್ಷಾ ಶುಲ್ಕವನ್ನು ಪಾವತಿಸಿದ ನಂತರ ಅದನ್ನು ಯಾವುದೇ ಸಂದರ್ಭದಲ್ಲಿಯೂ ಹಿಂದಿರುಗಿಸಲಾಗುವುದಿಲ್ಲ ಅಥವಾ ಅದನ್ನು ನೇಮಕಾತಿ ಸಮಿತಿಯು ನಡೆಸುವ ಇತರೆ ಯಾವುದೇ ಪರೀಕ್ಷೆ ಅಥವಾ ನೇಮಕಾತಿಗಳಿಗೆ ಹೊಂದಿಸಿಕೊಳ್ಳಲಾಗುವುದಿಲ್ಲ. ಮೇಲಿನ ಕಾಲಂಗಳಲ್ಲಿ ಅಭ್ಯರ್ಥಿಗೆ ಅನ್ವಯಿಸುವ ಅರ್ಜಿ ಶುಲ್ಕ ಮತ್ತು ಪರೀಕ್ಷಾ ಶುಲ್ಕವನ್ನು **ನಗದು ರೂಪದಲ್ಲಿ ಮಾತ್ರ** (ಆನ್-ಲೈನ್ ಮುಖೇನ ಕ್ರೆಡಿಟ್/ಡೆಬಿಟ್ ಕಾರ್ಡ್‌ನಲ್ಲಿ ಪಾವತಿಸುವವರನ್ನು ಹೊರತುಪಡಿಸಿ) ಪಾವತಿಸತಕ್ಕದ್ದು. (ಪಾವತಿಸುವ ವಿವರಗಳನ್ನು ಈ ಕೆಳಗಿನ ಪ್ಯಾರಾದಲ್ಲಿ ಸೂಚಿಸಲಾಗಿದೆ). **ಡಿಡಿ, ಪೋಸ್ಟಲ್ ಆರ್ಡರ್, ಮನಿ ಆರ್ಡರ್ ಇವುಗಳನ್ನು ಸ್ವೀಕರಿಸಲಾಗುವುದಿಲ್ಲ.**

ಬಿ) <u>**ಆನ್-ಲೈನ್ (On-line) ಮುಖಾಂತರ**</u> **:**

ಅಭ್ಯರ್ಥಿಯು ಇಲಾಖೆಯ ಅಧಿಕೃತ ವೆಬ್‌ಸೈಟ್ www.ksp.gov.in ಅಥವಾ www.ksp.gov.in/psi09 ಮೂಲಕ ಅರ್ಜಿಯನ್ನು ಪಡೆದುಕೊಂಡು (Download), ಕಂಪ್ಯೂಟರ್ ಪರದೆಯ ಮೇಲೆ ಅರ್ಜಿಯನ್ನು ತುಂಬಬೇಕು. ಈ ಅರ್ಜಿಯ ಜೊತೆಗೆ ಅಭ್ಯರ್ಥಿಯ ಪಾಸ್‌ಪೋರ್ಟ್ ಅಳತೆಯ ಬಣ್ಣದ ಭಾವಚಿತ್ರವನ್ನು (Soft Copy - less than 100 KB) ಕಡ್ಡಾಯವಾಗಿ ಸೇರಿಸಿ, ಕಂಪ್ಯೂಟರ್ ಮುಖೇನ ಅಪ್‌ಲೋಡ್ (Upload) ಮಾಡುವುದು. ಇಲ್ಲವಾದಲ್ಲಿ ಅಂತಹ ಅರ್ಜಿದಾರರು ಆನ್‌ಲೈನ್‌ನಲ್ಲಿ ಅರ್ಜಿಯನ್ನು ತುಂಬಿ ಮುಂದುವರೆಯಲು ಸಾಧ್ಯವಾಗುವುದಿಲ್ಲ. ಅಭ್ಯರ್ಥಿಗಳು ನೀಡಿರುವ ವಿವರಗಳು ಎಲ್ಲ ರೀತಿಯಿಂದಲೂ ಸಮರ್ಪಕವಾಗಿದ್ದು ಅರ್ಹತೆಯನ್ನು ಹೊಂದಿದ್ದಲ್ಲಿ ಮಾತ್ರ ಅರ್ಜಿದಾರರು ಆನ್‌ಲೈನ್‌ನಲ್ಲಿ ಮುಂದುವರೆಯಲು ಸಾಧ್ಯವಾಗುತ್ತದೆ. ಅರ್ಹ ಅಭ್ಯರ್ಥಿಯು Submit ಬಟನ್‌ಅನ್ನು ಒತ್ತಿದರೆ ಅರ್ಜಿ ಸಂಖ್ಯೆ ಸೃಜನೆಯಾಗುತ್ತದೆ. ಈ ಆನ್‌ಲೈನ್ ಅರ್ಜಿ ಸಂಖ್ಯೆಯನ್ನು ಅಭ್ಯರ್ಥಿಗಳು ಕಡ್ಡಾಯವಾಗಿ ಬರೆದಿಟ್ಟುಕೊಳ್ಳತಕ್ಕದ್ದು. <u>ಭರ್ತಿ ಮಾಡಿದ ಆನ್-ಲೈನ್ ಅರ್ಜಿಯ ಪ್ರತಿಯನ್ನು ಪ್ರಿಂಟ್ ಮಾಡಿಟ್ಟುಕೊಳ್ಳತಕ್ಕದ್ದು. ಈ ಅರ್ಜಿ ಸಂಖ್ಯೆಯು ಮುಂದಿನ ನೇಮಕಾತಿ ಪ್ರಕ್ರಿಯೆಯ ಎಲ್ಲಾ ಹಂತಗಳಿಗೆ ಅವಶ್ಯಕವಾಗಿರುತ್ತದೆ</u>. ಅರ್ಜಿ ಶುಲ್ಕ ಮತ್ತು ಪರೀಕ್ಷಾ ಶುಲ್ಕವನ್ನು ಕ್ರೆಡಿಟ್ / ಡೆಬಿಟ್ ಕಾರ್ಡ್ ಮುಖೇನ

ಪಾವತಿಸತಕ್ಕದ್ದು. ಕ್ರೆಡಿಟ್ / ಡೆಬಿಟ್ ಕಾರ್ಡ್‌ನ್ನು ಸಂಬಂಧಿಸಿದ ಬ್ಯಾಂಕ್ ಅಂಗೀಕರಿಸಿದಲ್ಲಿ ಮಾತ್ರ ಅರ್ಜಿ ಸಲ್ಲಿಸಿದಂತಾಗುತ್ತದೆ. ಕ್ರೆಡಿಟ್ / ಡೆಬಿಟ್ ಕಾರ್ಡ್ ಇಲ್ಲವಾದಲ್ಲಿ ನಗದು ರೂಪದಲ್ಲಿಯೂ ಸಹ ಪಾವತಿಸಬಹುದು. ಈ ಮೊತ್ತವನ್ನು ಪಾವತಿಸುವ ಸಲುವಾಗಿ Cash Payment Option ಆಯ್ಕೆ ಮಾಡಿದಾಗ ಒಂದು ತ್ರಿಪ್ರತಿ (Triplicate) ಚಲನ್ ತಯಾರಾಗುತ್ತದೆ. ಅಭ್ಯರ್ಥಿಯು ಈ ಚಲನ್‌ಅನ್ನು ಪ್ರಿಂಟ್ ಮಾಡಿಕೊಂಡು ಅದನ್ನು ತ್ರಿಪ್ರತಿಯಲ್ಲಿ ಭರ್ತಿ ಮಾಡಿ ಹತ್ತಿರದ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಅಥವಾ ಸ್ಟೇಟ್ ಬ್ಯಾಂಕ್ ಆಫ್ ಹೈದರಾಬಾದ್ (SBM ಬ್ಯಾಂಕ್ ದೊರಕದಿದ್ದ ಪಕ್ಷದಲ್ಲಿ) ಅಥವಾ ಆಕ್ಸಿಸ್ (AXIS Bank) ಬ್ಯಾಂಕಿನಲ್ಲಿ ಅರ್ಜಿ ಶುಲ್ಕ (75 ರೂ.), ಬ್ಯಾಂಕ್ ಶುಲ್ಕ (25 ರೂ.) ಒಟ್ಟು ರೂ.100/– ಹಾಗೂ ಪರೀಕ್ಷಾ ಶುಲ್ಕವನ್ನು (100 ರೂ. ಅಥವಾ 250 ರೂ. – ಅಭ್ಯರ್ಥಿಗೆ ಅನ್ವಯಿಸುವಂತೆ) ತುಂಬಿ ಅಭ್ಯರ್ಥಿಯು ಚಲನ್ ಮೇಲೆ ಬ್ಯಾಂಕ್ ಶಾಖೆಯ ಮೊಹರು ಪಡೆದರೆ ನಗದು ಮುಖೇನ ಅರ್ಜಿ ಸಲ್ಲಿಸಿದಂತಾಗುತ್ತದೆ. ಆನ್–ಲೈನ್ ಮುಖಾಂತರ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ದಿನಾಂಕ 22.06.2009 ರಂದು ಬೆಳಿಗ್ಗೆ 10–00 ಗಂಟೆಯಿಂದ ದಿನಾಂಕ 10.07.2009 ರಂದು ಮಧ್ಯಾಹ್ನ 14–00 ಗಂಟೆಯವರೆಗೆ ಸಲ್ಲಿಸತಕ್ಕದ್ದು. ಅರ್ಜಿ ಶುಲ್ಕ ಮತ್ತು ಪರೀಕ್ಷಾ ಶುಲ್ಕವನ್ನು ನಗದು ರೂಪದಲ್ಲಿ ಪಾವತಿಸುವವರು ಬ್ಯಾಂಕ್‌ನ ಕಛೇರಿಯ ವೇಳೆಯಲ್ಲಿ ಮಾತ್ರ ಪಾವತಿಸತಕ್ಕದ್ದು.

ಸಿ) **ಖುದ್ದಾಗಿ ಅರ್ಜಿ ಪಡೆದು ಸಲ್ಲಿಸುವ ಅಭ್ಯರ್ಥಿಗಳು:**

ಅರ್ಜಿ ಶುಲ್ಕ ರೂ.150/– ಗಳನ್ನು **ನಗದು ರೂಪದಲ್ಲಿ** ಪಾವತಿಸಿ ದಿನಾಂಕ 22.06.2009 ರಿಂದ 10.07.2009 ರವರೆಗೆ ಬೆಳಿಗ್ಗೆ 10–00 ಗಂಟೆಯಿಂದ ಸಾಯಂಕಾಲ 5–00 ಗಂಟೆಯವರೆಗೆ ಎಲ್ಲಾ ಕೆಲಸದ ದಿನಗಳಂದು (Working Days) ಅರ್ಜಿಯನ್ನು ಈ ಕೆಳಗೆ ನಮೂದಿಸಿರುವ ಪೊಲೀಸ್ ಕಛೇರಿಗಳಲ್ಲಿ ಪಡೆದುಕೊಳ್ಳಬಹುದಾಗಿದೆ. ಅರ್ಹ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ ಮತ್ತು ಪ್ರವರ್ಗ–1 ಅಭ್ಯರ್ಥಿಗಳಿಗೆ ರೂ. 100/– ಗಳನ್ನು ಪರೀಕ್ಷಾ ಶುಲ್ಕವಾಗಿ ನಿಗದಿಪಡಿಸಲಾಗಿದೆ ಹಾಗೂ ಇತರೇ ಎಲ್ಲಾ ಅರ್ಹ ಅಭ್ಯರ್ಥಿಗಳಿಂದ ಭರ್ತಿ ಮಾಡಿದ ಅರ್ಜಿಗಳನ್ನು ರೂ. 250/– ಗಳ ಪರೀಕ್ಷಾ ಶುಲ್ಕದೊಂದಿಗೆ **ನಗದು ರೂಪದಲ್ಲಿ** ದಿನಾಂಕ 10.07.2009 ರಂದು ಸಾಯಂಕಾಲ 6–00 ಗಂಟೆಯೊಳಗೆ ಅಥವಾ ಅದಕ್ಕಿಂತ ಮುಂಚಿತವಾಗಿ **ಅರ್ಜಿಯನ್ನು ಖರೀದಿಸಿದ ಕಛೇರಿಯಲ್ಲಿಯೇ** ಅಭ್ಯರ್ಥಿ ಖುದ್ದಾಗಿ ಸಲ್ಲಿಸಬಹುದಾಗಿರುತ್ತದೆ. ನಮೂದಿಸಿದ ಪರೀಕ್ಷಾ ಶುಲ್ಕವನ್ನು ಪಾವತಿಸದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

i) ಪೊಲೀಸ್ ಆಯುಕ್ತರು, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ
ii) ಪೊಲೀಸ್ ಆಯುಕ್ತರು, ಹುಬ್ಬಳ್ಳಿ–ಧಾರವಾಡ ನಗರ
iii) ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ದಕ್ಷಿಣ ವಲಯ, ಮೈಸೂರು
iv) ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಉತ್ತರ ವಲಯ, ಬೆಳಗಾವಿ
v) ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪೂರ್ವ ವಲಯ, ದಾವಣಗೆರೆ
vi) ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಈಶಾನ್ಯ ವಲಯ, ಗುಲ್ಬರ್ಗಾ
vii) ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪಶ್ಚಿಮ ವಲಯ, ಮಂಗಳೂರು

**ಸೂಚನೆ:** ಆನ್‌ಲೈನ್ ಅರ್ಜಿ ಅಥವಾ ಮೇಲ್ಕಾಣಿಸಿದ ಕಛೇರಿಗಳಿಂದ ಖರೀದಿಸಿದ ಅರ್ಜಿಗಳನ್ನು ಮಾತ್ರ ಸ್ವೀಕರಿಸಲಾಗುವುದು. ಜೆರಾಕ್ಸ್ ಮಾಡಿದ ಇಲ್ಲವೇ ಖಾಸಗಿ ವ್ಯಕ್ತಿಗಳಿಂದ ಕೊಂಡಂತಹ ಅರ್ಜಿಗಳು ಸ್ವೀಕೃತಿಗೆ ಅನರ್ಹವಾಗುತ್ತದೆ. ಕೊರಿಯರ್ / ಪೋಸ್ಟ್ ಮುಖಾಂತರ ಕಳುಹಿಸಲಾಗುವ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ. ಆನ್‌ಲೈನ್ ಮುಖಾಂತರ ಭರ್ತಿ ಮಾಡಿದ ಹಾಗು ಖುದ್ದಾಗಿ ಕೌಂಟರ್‌ನಲ್ಲಿ ನೀಡುವ ಅರ್ಜಿಗಳನ್ನು ಮಾತ್ರ ಸ್ವೀಕರಿಸಲಾಗುವುದು.

ಡಿ) ಈ ಕೆಳಗೆ ನಮೂದಿಸಿರುವ ಖಾಲಿ ಹುದ್ದೆಗಳ ಸಂಖ್ಯೆ ತಾತ್ಕಾಲಿಕವಾಗಿದ್ದು, ಅವಶ್ಯಕತೆ ಹಾಗೂ ಸಂದರ್ಭಕ್ಕೆ ಅನುಗುಣವಾಗಿ ಬದಲಾವಣೆ ಮಾಡಲಾಗುವುದು.

| | | |
|---|---|---|
| i) ಪೊಲೀಸ್ ಸಬ್ ಇನ್ಸ್‌ಪೆಕ್ಟರ್ (ಸಿವಿಲ್) | – | 320 ಹುದ್ದೆಗಳು |
| ii) ಮಹಿಳಾ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ | – | 40 ಹುದ್ದೆಗಳು |
| iii) ಪೊಲೀಸ್ ಸಬ್ ಇನ್ಸ್‌ಪೆಕ್ಟರ್ (ಸಿವಿಲ್) ಸೇವೆಯಲ್ಲಿರುವವರಿಗೆ | – | 40 ಹುದ್ದೆಗಳು |
| ಒಟ್ಟು | – | 400 ಹುದ್ದೆಗಳು |

ಇ) ಪೊಲೀಸ್ ಸಬ್ ಇನ್ಸ್‌ಪೆಕ್ಟರ್ (ಸಿವಿಲ್), ಮಹಿಳಾ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ಹಾಗೂ ಸೇವೆಯಲ್ಲಿರುವವರ ಖಾಲಿ ಹುದ್ದೆಗಳ ವರ್ಗೀಕರಣ ಈ ಕೆಳಕಂಡಂತಿದೆ:

i) ಪೊಲೀಸ್ ಸಬ್ ಇನ್ಸ್‌ಪೆಕ್ಟರ್ (ಸಿವಿಲ್) – 320 ಖಾಲಿ ಹುದ್ದೆಗಳ ವರ್ಗೀಕರಣ ಈ ಕೆಳಕಂಡಂತಿದೆ:

| ವರ್ಗ | ಒಟ್ಟು ಹುದ್ದೆಗಳ ಸಂಖ್ಯೆ | ಗ್ರಾಮೀಣ ಅಭ್ಯರ್ಥಿ | ಮಾಜಿ ಸೈನಿಕರು | ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿ | ಕನ್ನಡ ಮಾಧ್ಯಮ | ಇತರರು |
|---|---|---|---|---|---|---|
| ಸಾಮಾನ್ಯ ವರ್ಗ | 160 | 40 | 16 | 8 | 8 | 88 |
| ಪರಿಶಿಷ್ಟ ಜಾತಿ | 48 | 12 | 5 | 3 | 3 | 25 |
| ಪರಿಶಿಷ್ಟ ಪಂಗಡ | 10 | 3 | 1 | – | 1 | 5 |
| ಪ್ರವರ್ಗ–1 | 13 | 3 | 1 | 1 | – | 8 |
| ಪ್ರವರ್ಗ–2ಎ | 47 | 12 | 4 | 3 | 3 | 25 |
| ಪ್ರವರ್ಗ–2ಬಿ | 13 | 3 | 1 | 1 | – | 8 |
| ಪ್ರವರ್ಗ–3ಎ | 13 | 3 | 1 | 1 | – | 8 |
| ಪ್ರವರ್ಗ–3ಬಿ | 16 | 4 | 2 | 1 | 1 | 8 |
| **ಒಟ್ಟು** | **320** | **80** | **31** | **18** | **16** | **175** |

ii) ಮಹಿಳಾ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ – 40 ಖಾಲಿ ಹುದ್ದೆಗಳ ವರ್ಗೀಕರಣ ಈ ಕೆಳಕಂಡಂತಿದೆ:

| ವರ್ಗ | ಒಟ್ಟು ಹುದ್ದೆಗಳ ಸಂಖ್ಯೆ | ಗ್ರಾಮೀಣ ಅಭ್ಯರ್ಥಿ | ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿ | ಕನ್ನಡ ಮಾಧ್ಯಮ | ಇತರರು |
|---|---|---|---|---|---|
| ಸಾಮಾನ್ಯ ವರ್ಗ | 20 | 5 | 1 | 1 | 13 |
| ಪರಿಶಿಷ್ಟ ಜಾತಿ | 6 | 1 | – | 1 | 4 |
| ಪರಿಶಿಷ್ಟ ಪಂಗಡ | 1 | 1 | – | – | – |
| ಪ್ರವರ್ಗ–1 | 1 | – | – | – | 1 |
| ಪ್ರವರ್ಗ–2ಎ | 6 | 1 | – | 1 | 4 |
| ಪ್ರವರ್ಗ–2ಬಿ | 2 | 1 | – | – | 1 |
| ಪ್ರವರ್ಗ–3ಎ | 2 | 1 | – | – | 1 |
| ಪ್ರವರ್ಗ–3ಬಿ | 2 | – | – | – | 2 |
| **ಒಟ್ಟು** | **40** | **10** | **1** | **3** | **26** |

iii) ಪೊಲೀಸ್ ಸಬ್ ಇನ್ಸ್‌ಪೆಕ್ಟರ್ (ಸಿವಿಲ್) ಸೇವೆಯಲ್ಲಿರುವವರು – 40 ಖಾಲಿ ಹುದ್ದೆಗಳ ವರ್ಗೀಕರಣ ಈ ಕೆಳಕಂಡಂತಿದೆ:

| ವರ್ಗ | ಒಟ್ಟು ಹುದ್ದೆಗಳ ಸಂಖ್ಯೆ | ಗ್ರಾಮೀಣ ಅಭ್ಯರ್ಥಿ | ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿ | ಕನ್ನಡ ಮಾಧ್ಯಮ | ಇತರರು |
|---|---|---|---|---|---|
| ಸಾಮಾನ್ಯ ವರ್ಗ | 20 | 5 | 1 | 1 | 13 |
| ಪರಿಶಿಷ್ಟ ಜಾತಿ | 6 | 1 | 1 | – | 4 |
| ಪರಿಶಿಷ್ಟ ಪಂಗಡ | 1 | – | – | – | 1 |

| ವರ್ಗ | ಒಟ್ಟು ಹುದ್ದೆಗಳ ಸಂಖ್ಯೆ | ಗ್ರಾಮೀಣ ಅಭ್ಯರ್ಥಿ | ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿ | ಕನ್ನಡ ಮಾಧ್ಯಮ | ಇತರರು |
|---|---|---|---|---|---|
| ಪ್ರವರ್ಗ–1 | 2 | 1 | – | – | 1 |
| ಪ್ರವರ್ಗ–2ಎ | 6 | 1 | 1 | – | 4 |
| ಪ್ರವರ್ಗ–2ಬಿ | 2 | 1 | – | – | 1 |
| ಪ್ರವರ್ಗ–3ಎ | 1 | – | – | – | 1 |
| ಪ್ರವರ್ಗ–3ಬಿ | 2 | 1 | – | – | 1 |
| **ಒಟ್ಟು** | **40** | **10** | **3** | **1** | **26** |

**ಟಿಪ್ಪಣಿ :–**
ಗ್ರಾಮೀಣ, ಮಾಜಿ ಸೈನಿಕರು, ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿ ಮತ್ತು ಕನ್ನಡ ಮಾಧ್ಯಮ ಅಭ್ಯರ್ಥಿಗಳು ಲಭ್ಯವಿಲ್ಲದಿದ್ದಲ್ಲಿ ಅಂತಹ ಖಾಲಿ ಹುದ್ದೆಗಳನ್ನು ಮೇಲೆ ನಮೂದಿಸಿರುವ ಅದೇ ಪ್ರವರ್ಗದ ಇತರ ಅಭ್ಯರ್ಥಿಗಳಿಂದ ತುಂಬಲಾಗುವುದು.

**2. ಅರ್ಹತೆಗಳು:**

(ಎ) **ಅರ್ಹತಾ ಷರತ್ತುಗಳು** :

i) ಭಾರತೀಯ ನಾಗರೀಕನಾಗಿರತಕ್ಕದ್ದು.

ii) ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯರನ್ನು ಹೊಂದಿರುವ ಪುರುಷ ಅಭ್ಯರ್ಥಿ ಮತ್ತು ಈಗಾಗಲೇ ಇನ್ನೊಬ್ಬ ಹೆಂಡತಿ ಇರುವ ವ್ಯಕ್ತಿಯನ್ನು ಮದುವೆಯಾಗಿರುವ, ಮಹಿಳಾ ಅಭ್ಯರ್ಥಿಯು ಸರ್ಕಾರದಿಂದ ಪೂರ್ವಾನುಮತಿಯನ್ನು ಪಡೆಯದೇ ನೇಮಕಾತಿಗೆ ಅರ್ಹರಾಗುವುದಿಲ್ಲ.

iii) ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯ ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನತೆಯಿಂದ ಮುಕ್ತರಾಗಿರಬೇಕು.

(ಬಿ) **ವಯೋಮಿತಿ:**

i) **ಸಾಮಾನ್ಯ ಮತ್ತು ಮಹಿಳಾ ಅಭ್ಯರ್ಥಿಗಳಿಗೆ:**
ಅರ್ಜಿಯನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಂದರೆ 10.07.2009 ಕ್ಕೆ ಅಭ್ಯರ್ಥಿಗೆ ಕನಿಷ್ಠ 21 ವರ್ಷ ವಯಸ್ಸಾಗಿರಬೇಕು ಹಾಗೂ ಈ ಕೆಳಕಂಡ ವಯಸ್ಸು ಮೀರಿರಬಾರದು.

ಅ) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳಿಗೆ 28 ವರ್ಷಗಳು.

ಆ) ಇತರೆ ಅಭ್ಯರ್ಥಿಗಳಿಗೆ 26 ವರ್ಷಗಳು.

ಇ) ಮಾಜಿ ಸೈನಿಕ ಅಭ್ಯರ್ಥಿಯು ಸೈನ್ಯ ವಿಯೋಜನೆ, ಸೇವೆಯಿಂದ ತೆಗೆದು ಹಾಕಿದ ಹಾಗೂ ಸೇವಾ ನಿವೃತ್ತಿ ಹೊಂದಿದ ಕಾರಣದಿಂದ ಬಿಡುಗಡೆಯಾದ ಮಾಜಿ ಯೋಧರಾಗಿದ್ದಲ್ಲಿ ಅವರಿಗೆ ಅವರು ಸೇವೆ ಸಲ್ಲಿಸಿದ ಸೇವಾವಧಿಯ ಜೊತೆಗೆ ಹೆಚ್ಚುವರಿ 03 ವರ್ಷಗಳ ರಿಯಾಯಿತಿಯನ್ನು ನೀಡಲಾಗುವುದು.

ii) **ಸೇವಾನಿರತ ಅಭ್ಯರ್ಥಿಗಳಿಗೆ:**
ಅರ್ಜಿಯನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಂದರೆ 10.07.2009 ಕ್ಕೆ ಅಭ್ಯರ್ಥಿಗೆ ಈ ಕೆಳಕಂಡ ವಯಸ್ಸು ಮೀರಿರಬಾರದು–

ಅ) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳಿಗೆ 40 ವರ್ಷಗಳು.

ಆ) ಇತರೆ ಅಭ್ಯರ್ಥಿಗಳಿಗೆ 35 ವರ್ಷಗಳು.

**ಟಿಪ್ಪಣಿ:** ಪೊಲೀಸ್ ಇಲಾಖೆಯ ಯಾವುದೇ ವೃಂದದಲ್ಲಿ 8 ವರ್ಷಗಳು ಕನಿಷ್ಠ ಸೇವೆಯನ್ನು (ಅರ್ಜಿ ಸಲ್ಲಿಸುವ ಕೊನೆಯ ದಿನಾಂಕ ಅಂದರೆ 10.07.2009ಕ್ಕೆ ಹೊಂದಿರಬೇಕು) ಸಹಾಯಕ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ / ಹೆಡ್ ಕಾನ್ಸ್‌ಟೇಬಲ್ / ಪೊಲೀಸ್ ಕಾನ್ಸ್‌ಟೇಬಲ್ ಆಗಿ ಹೊಂದಿರಬೇಕು.

iii) **ಮಾಜಿ ಸೈನಿಕ ಅಭ್ಯರ್ಥಿಗಳಿಗೆ:**

ಮಾಜಿ ಸೈನಿಕ ಅಭ್ಯರ್ಥಿಯು ಸೈನ್ಯ ವಿಯೋಜನೆ, ಸೇವೆಯಿಂದ ತೆಗೆದುಹಾಕಿದ ಹಾಗೂ ಸೇವಾ ನಿವೃತ್ತಿ ಹೊಂದಿದ ಕಾರಣದಿಂದ ಬಿಡುಗಡೆಯಾದ ಮಾಜಿ ಯೋಧರಾಗಿದ್ದಲ್ಲಿ "ಅವರು ಸೇವೆ ಸಲ್ಲಿಸಿದ ಅವಧಿ" ಯ ಜೊತೆಗೆ ಹೆಚ್ಚುವರಿ 03 ವರ್ಷಗಳ ರಿಯಾಯಿತಿಗಳನ್ನು ನೀಡಲಾಗುವುದು. ಮಾಜಿ ಯೋಧ ಎಂಬ ಶಬ್ದವು ಚಾಲ್ತಿಯಲ್ಲಿರುವ ಸಂಬಂಧಿಸಿದ ನಿಯಮಾವಳಿಗಳಲ್ಲಿನ ಪರಿಭಾಷೆಯ ಅರ್ಥ ಹೊಂದಿದೆ.

iv) **ಮಾಜಿ ಸೈನಿಕರ ಬಗ್ಗೆ ವಿವರಣೆ:**

ಮಾಜಿ ಸೈನಿಕ ಎಂದರೆ ಸಶಸ್ತ್ರ ದಳಗಳಾದ ನಿಯಮಿತ ಭೂದಳ, ನೌಕಾದಳ ಮತ್ತು ವಾಯು ದಳದಲ್ಲಿ ಯಾವುದೇ ಶ್ರೇಣಿಯಲ್ಲಿ (ಯೋಧ ಅಥವಾ ಅಯೋಧನಾಗಿ) ಸೇವೆ ಸಲ್ಲಿಸಿದ ವ್ಯಕ್ತಿ, ಆದರೆ ಡಿಫೆನ್ಸ್ ಸೆಕ್ಯುರಿಟಿ ಕೋರ್ (Defence Security Corps), ಜನರಲ್ ರಿಸರ್ವ್ ಇಂಜಿನಿಯರಿಂಗ್ ಫೋರ್ಸ್ (General Reserved Engineering Force), ಲೋಕ್ ಸಹಾಯಕ್ ಸೇನಾ (Lok Sahayak Sena) ಮತ್ತು ಪ್ಯಾರಾ ಮಿಲಿಟರಿ ದಳ (Para Military Forces) ದಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಸೇರ್ಪಡೆಯಾಗುವುದಿಲ್ಲ; ಮತ್ತು

(ಅ) ಅಂತಹ ಸೇನೆಯಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನ ಪಡೆಯುತ್ತಿರುವ

**ಅಥವಾ**

(ಆ) ವೈದ್ಯಕೀಯ ಕಾರಣಗಳಿಂದ ಮಿಲಿಟರಿ ಸೇವೆಯಿಂದ ಬಿಡುಗಡೆಯಾದ ಅಥವಾ ವ್ಯಕ್ತಿಯ ಹಿಡಿತಕ್ಕೂ ಮೀರಿದ ಪರಿಸ್ಥಿತಿಗಳಿಂದ ಮತ್ತು ವೈದ್ಯಕೀಯ ಅಥವಾ ಅಸಾಮರ್ಥ್ಯದ ಪಿಂಚಣಿ ಪಡೆದು ಅಂತಹ ಸೇವೆಯಲ್ಲಿ ಬಿಡುಗಡೆಯಾದವನು.

**ಅಥವಾ**

(ಇ) ಸ್ವಂತ ಕೋರಿಕೆ ಹೊರತುಪಡಿಸಿ ಸಿಬ್ಬಂದಿ ಕಡಿತದ ಪರಿಣಾಮದಿಂದ ಅಂತಹ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿ.

**ಅಥವಾ**

(ಈ) ತನ್ನ ಸ್ವಂತ ಕೋರಿಕೆ ಮೇರೆಗೆ ಅಥವಾ ದುರ್ನಡತೆ ಅಥವಾ ಅಸಾಮರ್ಥ್ಯದ ಕಾರಣದಿಂದಾಗಿ ತೆಗೆದುಹಾಕಿರುವ ಅಥವಾ ಕರ್ತವ್ಯದಿಂದ ವಜಾ ಮಾಡಿದ ವ್ಯಕ್ತಿಗಳನ್ನು ಹೊರತುಪಡಿಸಿ, ನಿರ್ದಿಷ್ಟ ಅವಧಿಯನ್ನು ಪೂರೈಸಿದ ತರುವಾಯ ಬಿಡುಗಡೆ ಹೊಂದಿದ ವ್ಯಕ್ತಿ ಮತ್ತು ಗ್ರಾಚ್ಯುಟಿ ಪಡೆಯುತ್ತಿರುವ ವ್ಯಕ್ತಿ ಮತ್ತು ಪ್ರಾಂತೀಯ ಸೇವೆಯ ಈ ಕೆಳಗೆ ಹೆಸರಿಸಿದ ವರ್ಗದ ಸಿಬ್ಬಂದಿಯವರು:

೧. ನಿರಂತರ ಸೇವೆ ಸಲ್ಲಿಸಿ ನಿವೃತ್ತಿ ಹೊಂದಿದ ಪಿಂಚಣಿದಾರರು.
೨. ಮಿಲಿಟರಿ ಸೇವೆಯಿಂದಾಗಿ ಉಂಟಾದ ದೈಹಿಕ ಅಸಾಮರ್ಥ್ಯತೆ ಹೊಂದಿ ಬಿಡುಗಡೆಯಾದ ವ್ಯಕ್ತಿ.
೩. ಗ್ಯಾಲಂಟ್ರಿ ಪ್ರಶಸ್ತಿ ವಿಜೇತರು.

**ವಿವರಣೆ:** ಕೇಂದ್ರ ಸಶಸ್ತ್ರದಳದ ಸೇವೆಯಲ್ಲಿ ವ್ಯಕ್ತಿಗಳು ಸೇವೆಯಿಂದ ನಿವೃತ್ತಿ ಹೊಂದಿದ ನಂತರ ಮಾಜಿ ಸೈನಿಕರ ವರ್ಗದಡಿ ಬರುವ ವ್ಯಕ್ತಿಗೆ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಉದ್ಯೋಗಕ್ಕೆ ಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿ ಸೈನಿಕರಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಹೊಂದಲು ಅನುಮತಿ ನೀಡಲಾಗಿದೆ. ಆದರೆ ಸಮವಸ್ತ್ರವನ್ನು ತ್ಯಜಿಸಲು ಅನುಮತಿ ನೀಡುವವರೆಗೆ ರಾಜ್ಯ ನಾಗರೀಕ ಸೇವೆ ಅಥವಾ ಹುದ್ದೆಗಳಿಗೆ ನೇಮಕ ಹೊಂದುವಂತಿಲ್ಲ.

v) ಭಾರತ ಸರ್ಕಾರದ ಅಧಿಕೃತ ಜ್ಞಾಪನ ಪತ್ರ ಸಂಖ್ಯೆ.36034/27/84–ಸಿಬ್ಬಂದಿ (ಎಸ್‌ಸಿಟಿ), ದಿನಾಂಕ 02.05.1985 ರನ್ವಯ ಮಾಜಿ ಸೈನಿಕರು ಅವರಿಗೆ ನೀಡಿರುವ ಪ್ರಯೋಜನವಾದ ಪುನರ್ ನೇಮಕವನ್ನು ಉಪಯೋಗಿಸಿಕೊಂಡು ಒಂದು ಬಾರಿ ಸರ್ಕಾರಿ ಹುದ್ದೆಗೆ ಆಯ್ಕೆಯಾದಲ್ಲಿ ಅಂತಹ ಮಾಜಿ ಸೈನಿಕರ ಸ್ಥಾನವು ಸರ್ಕಾರಿ ಉದ್ಯೋಗದ ಪುನರ್ ನೇಮಕಕ್ಕೆ ರದ್ದಾಗುತ್ತದೆ. ಕರ್ನಾಟಕ ಸರ್ಕಾರದ ಪತ್ರ ಸಂಖ್ಯೆ.ಒಇ/90/ಪೊಸಿಅ/2005, ದಿನಾಂಕ 02.02.2006ರ ಪತ್ರದಲ್ಲಿ ದಿನಾಂಕ 02.05.1985ರ ಕೇಂದ್ರ ಸರ್ಕಾರದ ಅಧಿಕೃತ ಜ್ಞಾಪನದಲ್ಲಿನ ಮಾರ್ಗಸೂಚಿಯನ್ವಯ ಕ್ರಮ ಕೈಗೊಳ್ಳುವಂತೆ ಸೂಚಿಸಲಾಗಿರುತ್ತದೆ. **(ಈ ಕಾರಣದಿಂದ ಮಾಜಿ ಸೈನಿಕರು ಕಡ್ಡಾಯವಾಗಿ ಅರ್ಜಿಯ (OMR) ಕಾಲಂ 8ಎ ಭರ್ತಿ ಮಾಡತಕ್ಕದ್ದು)**

vi) ಈ ಅರ್ಜಿಯನ್ನು ಸಲ್ಲಿಸುವ ಕೊನೆಯ ದಿನಾಂಕದ ನಂತರ ಯಾವೊಬ್ಬ ಮಾಜಿ ಸೈನಿಕ ಸರ್ಕಾರಿ ನೌಕರಿಯೊಂದಕ್ಕೆ ಮಾಜಿ ಸೈನಿಕ ಮೀಸಲಾತಿ ಪಡೆದು ಸೇರಿದರೆ, ಅಂತಹ ಮಾಜಿ ಸೈನಿಕ ತಾನು ನೌಕರಿ ಸೇರಿದ ಬಗ್ಗೆ ಸದಸ್ಯ ಕಾರ್ಯದರ್ಶಿಗಳ ಕಛೇರಿಗೆ ಮಾಹಿತಿ ನೀಡತಕ್ಕದ್ದು. ಇಂತಹ ಅಭ್ಯರ್ಥಿಯು ಮಾಜಿ ಸೈನಿಕ ಮೀಸಲಾತಿಗೆ ಅನರ್ಹನಾಗುತ್ತಾನೆ.

vii) ಮಾಜಿ ಯೋಧ ಎಂಬ ಶಬ್ದವು ಚಾಲ್ತಿಯಲ್ಲಿರುವ ಸಂಬಂಧಿಸಿದ ನಿಯಮಾವಳಿಗಳಲ್ಲಿನ ಪರಿಭಾಷೆಯ ಅರ್ಥ ಹೊಂದಿದೆ.

**3. ವಿದ್ಯಾರ್ಹತೆ:**

ಯು.ಜಿ.ಸಿ. ಇಂದ ಮಾನ್ಯತೆ ಪಡೆದಿರುವ ಅಂಗೀಕೃತ ವಿಶ್ವವಿದ್ಯಾಲಯದಲ್ಲಿ ಪದವಿ ಅಥವಾ ತತ್ಸಮಾನ ಪದವಿಯನ್ನು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕ, ಅಂದರೆ 10.07.2009 ಕ್ಕೆ ಹೊಂದಿರಬೇಕು. (ಮಾಜಿ ಸೈನಿಕ ಅಭ್ಯರ್ಥಿಗಳು ಸೈನ್ಯದಲ್ಲಿ ನೀಡಿದ ಪದವಿ ಪ್ರಮಾಣ ಪತ್ರವನ್ನು ದಿನಾಂಕ 10.07.2009 ರೊಳಗೆ ಹೊಂದಿದ್ದರೆ ಅಂತಹ ಅಭ್ಯರ್ಥಿಗಳ ಅಭ್ಯರ್ಥಿತನವನ್ನು ಮಾತ್ರ ಪರಿಗಣಿಸಲಾಗುವುದು).

**ಎ) ಸೇವಾನಿರತ ಅಭ್ಯರ್ಥಿಗಳಿಗೆ ವಿದ್ಯಾರ್ಹತೆ ಮತ್ತು ಅನುಭವ:**

ಅಂಗೀಕೃತ ವಿಶ್ವವಿದ್ಯಾಲಯದಲ್ಲಿ ಪದವಿ ಅಥವಾ ತತ್ಸಮಾನ ಪದವಿ ಜೊತೆಯಲ್ಲಿ ಪೊಲೀಸ್ ಇಲಾಖೆಯ ಯಾವುದೇ ವೃಂದದಲ್ಲಿ 8 ವರ್ಷಗಳ ಕನಿಷ್ಟ ಸೇವೆಯನ್ನು (ಅರ್ಜಿ ಸಲ್ಲಿಸುವ ಕೊನೆಯ ದಿನಾಂಕ ಅಂದರೆ 10.07.2009ಕ್ಕೆ ಹೊಂದಿರಬೇಕು) ಸಹಾಯಕ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ / ಹೆಡ್ ಕಾನ್ಸ್‌ಟೇಬಲ್ / ಪೊಲೀಸ್ ಕಾನ್ಸ್‌ಟೇಬಲ್ ಆಗಿ ಪೂರ್ಣಗೊಳಿಸಿರಬೇಕು. (ಸೇವಾನಿರತ ಅಭ್ಯರ್ಥಿಗಳು ಮಾಹಿತಿ ಸೂಚಿಯ ಪುಟ ಸಂಖ್ಯೆ–33 ಮತ್ತು 34 ರಲ್ಲಿರುವ ಅನುಬಂಧ–'ಎ' & 'ಬಿ' ಅನ್ನು ಕಡ್ಡಾಯವಾಗಿ ಅರ್ಜಿ ಸಲ್ಲಿಸಲು ನಿಗಧಿಪಡಿಸಿರುವ ಕೊನೆಯ ದಿನಾಂಕ ಅಂದರೆ 10.07.2009ರೊಳಗೆ ಮಾಡಿಸಿಟ್ಟುಕೊಂಡಿರತಕ್ಕದ್ದು)

**ಟಿಪ್ಪಣಿ :**

i) ಡಿಪ್ಲೊಮಾ ಇತ್ಯಾದಿ ವಿದ್ಯಾರ್ಹತೆಗಳು ಪದವಿಗೆ ಸಮಾನವಾಗುವುದಿಲ್ಲ. ಆದ್ದರಿಂದ ಸಬ್ ಇನ್ಸ್‌ಪೆಕ್ಟರ್ ಆಫ್ ಪೊಲೀಸ್ ಹುದ್ದೆಗೆ ಈ ವಿದ್ಯಾರ್ಹತೆಯ ಅಭ್ಯರ್ಥಿಗಳು ಅರ್ಹರಾಗುವುದಿಲ್ಲ.

ii) ಅರ್ಜಿ ಸಲ್ಲಿಸಲು ನಿಗಧಿಪಡಿಸಿದ ಕೊನೆಯ ದಿನಾಂಕದಂದು ನಿಗಧಿತ ವಿದ್ಯಾರ್ಹತೆಯಾದ ಪದವಿಯನ್ನು ಪಡೆಯಲು ಪರೀಕ್ಷೆ ಬರೆದು ಫಲಿತಾಂಶಕ್ಕಾಗಿ ಕಾಯುತ್ತಿರುವ ಅಭ್ಯರ್ಥಿಗಳು ಅರ್ಹರಾಗಿರುವುದಿಲ್ಲ. ಮೇಲಿನ ವಿದ್ಯಾರ್ಹತೆಯನ್ನು ಹೊರತು ಪಡಿಸಿ ಬೇರೆ ಯಾವ ವಿದ್ಯಾರ್ಹತೆಯನ್ನೂ ಪರಿಗಣಿಸಲಾಗುವುದಿಲ್ಲ.

**4. ತರಬೇತಿ, ಖಾಯಂಪೂರ್ವ ಅವಧಿ ಮತ್ತು ವೇತನ ಶ್ರೇಣಿ :**

ಎ) ತರಬೇತಿ:

ನೇಮಕಾತಿ ಹೊಂದಿದ ಅಭ್ಯರ್ಥಿಗಳು ಕರ್ನಾಟಕ ಪೊಲೀಸ್ ಅಕಾಡೆಮಿ, ಮೈಸೂರು ಅಥವಾ ಪೊಲೀಸ್ ತರಬೇತಿ ಕೇಂದ್ರ, ಗುಲ್ಬರ್ಗಾ ಅಥವಾ ಪೊಲೀಸ್ ಇಲಾಖೆಯು ತೀರ್ಮಾನಿಸಿದ ಇತರೆ ತರಬೇತಿ ಕೇಂದ್ರದಲ್ಲಿ ಹನ್ನೆರಡು ತಿಂಗಳ ತರಬೇತಿಯನ್ನು ಪಡೆಯಬೇಕಾಗಿದ್ದು, ತರಬೇತಿಯ ಕೊನೆಯಲ್ಲಿ ನಿಗದಿತ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕು.

ಬಿ) ಖಾಯಂಪೂರ್ವ ಅವಧಿ:

**ಮೂಲ ತರಬೇತಿ ಮತ್ತು ಪ್ರಾಯೋಗಿಕ ತರಬೇತಿ ಸೇರಿದಂತೆ ಎರಡು ವರ್ಷ ಆರು ತಿಂಗಳು.**

ಸಿ) ವೇತನ ಶ್ರೇಣಿ:

**ರೂ. 10000–250–10500–300–12300–350–14400–400–16800–450–18150**

**5. ಸಹಿಷ್ಣುತೆ ಪರೀಕ್ಷೆ (Endurance Test) ಮತ್ತು ದೇಹದಾರ್ಢ್ಯತೆ ಪರೀಕ್ಷೆ :**

ಎ) ಅಭ್ಯರ್ಥಿಗಳಿಗೆ ಸಹಿಷ್ಣುತೆ ಮತ್ತು ದೇಹದಾರ್ಢ್ಯತೆ ಪರೀಕ್ಷೆಯನ್ನು ಈ ಕೆಳಗೆ ನಮೂದಿಸಿರುವ 07 ಕೇಂದ್ರಗಳಲ್ಲಿ ನಡೆಸಲಾಗುವುದು. ಆಗಸ್ಟ್ ತಿಂಗಳ ಮೂರನೇ ವಾರ ಅಥವಾ ನಂತರದ ವಾರದಲ್ಲಿ ಈ ಪರೀಕ್ಷೆಗಳನ್ನು ನಡೆಸಲು ಉದ್ದೇಶಿಸಲಾಗಿದೆ. **ಅಭ್ಯರ್ಥಿಯು ಓ.ಎಂ.ಆರ್. ನಲ್ಲಿ ನೀಡಿರುವ ಮಾಹಿತಿ ಮೇರೆಗೆ ಅಭ್ಯರ್ಥಿಗಳಿಗೆ ಸಹಿಷ್ಣುತೆ ಮತ್ತು ದೇಹದಾರ್ಢ್ಯತೆ ಪರೀಕ್ಷೆಗಳಿಗೆ ಕರೆಯಲಾಗುವುದು. ಆದ್ದರಿಂದ ಅಭ್ಯರ್ಥಿಗಳು ಓ.ಎಂ.ಆರ್. ಅರ್ಜಿಯನ್ನು ಬಹಳ ಜಾಗರೂಕತೆಯಿಂದ ತುಂಬಬೇಕು. ಒಂದು ವೇಳೆ ಯಾವುದೇ ತಪ್ಪು / ಸುಳ್ಳು ಮಾಹಿತಿ ನೀಡಿದ್ದಲ್ಲಿ ಅಂತಹ ಅಭ್ಯರ್ಥಿಯ ಅಭ್ಯರ್ಥಿತನವು ರದ್ದಾಗುತ್ತದೆ. ಇದಕ್ಕೆ ಅಭ್ಯರ್ಥಿಯೇ ಸಂಪೂರ್ಣ ಜವಾಬ್ದಾರನಾಗಿರುತ್ತಾನೆ.**

ಬಿ) **ಒಂದಕ್ಕಿಂತ ಹೆಚ್ಚು ಅರ್ಜಿ ಸಲ್ಲಿಸಿ ಒಂದಕ್ಕಿಂತ ಹೆಚ್ಚು ಕಡೆಗಳಲ್ಲಿ ದೈಹಿಕ ಪರೀಕ್ಷೆಗಳಿಗೆ ಹಾಜರಾದರೆ, ಅಂತಹ ಅಭ್ಯರ್ಥಿಯ ಅಭ್ಯರ್ಥಿತನವನ್ನು ರದ್ದು ಪಡಿಸಲಾಗುವುದು. (ವಿಶೇಷ ಸೂಚನೆಗಳು 14(ಸಿ) ನೋಡಿ) ಆಯ್ಕೆ ಸಮಿತಿಯ ತೀರ್ಮಾನವೇ ಅಂತಿಮ.**

ಸಿ) **ಸಹಿಷ್ಣುತೆ ಮತ್ತು ದೇಹದಾರ್ಢ್ಯತೆ ಪರೀಕ್ಷೆಯನ್ನು ಈ ಕೆಳಕಂಡ 07 ಕೇಂದ್ರಗಳಲ್ಲಿ ಮತ್ತು ಲಿಖಿತ ಪರೀಕ್ಷೆಯನ್ನು ಈ ಕೆಳಕಂಡ 07 ಕೇಂದ್ರಗಳಲ್ಲಿ ನಡೆಸಲಾಗುವುದು.**

(ಆಯ್ಕೆ ಸಮಿತಿಯು ಯಾವುದೇ ಪರೀಕ್ಷಾ ಕೇಂದ್ರವನ್ನು ರದ್ದುಪಡಿಸುವ ಅಥವಾ ಹೊಸದಾಗಿ ಸೇರಿಸುವ ಹಕ್ಕನ್ನು ಕಾಯ್ದಿರಿಸಿಕೊಂಡಿರುತ್ತದೆ).

